ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬ್ತುಗಳಿಗೆ (0070-01-501-0-06) ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಲಾದ ರೂ.1000 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952)ರ ಕಲಂ 4ರ ಅಡಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ಶಕುಂತಲ**

ಪಿ.ಆರ್. 16 ಸರ್ಕಾರದ ಅಧೀನ ಕಾರ್ಯದರ್ಶಿ, (ಆಡಳಿತ-2)

ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಕೆ.ಎಂ.ಚಂದ್ರೇಗೌಡ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ- ಆರೋಪಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) ನೋಟೀಸ್ ಸಂಖ್ಯೆ:ಸಿಆಸುಇ 127 ಎಸ್‌ಇಎನ್ 02 ದಿ:25.01.03.
2) ಶ್ರೀ ಕೆ.ಎಂ.ಚಂದ್ರೇಗೌಡ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರ ಉತ್ತರ ದಿ:04.03.03.
3) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 127 ಎಸ್‌ಇಎನ್ 02 ದಿ:05.08.03.
4) ಶ್ರೀ ಕೆ.ಕೃಷ್ಣನ್ಯಾಕ್, ನಿವೃತ್ತ ನ್ಯಾಯಾಧೀಶರು ಅವರ ದಿ:13.07.04ರ ವಿಚಾರಣಾ ವರದಿ.

**ಪ್ರಸ್ತಾವನೆ:-**

ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ಕಾರ್ಯದರ್ಶಿ ಹುದ್ದೆಯಿಂದ ವರ್ಗಾವಣೆಗೊಂಡು 1998ರ ಆಗಸ್ಟ್‌ನಲ್ಲಿ ಬಿಡುಗಡೆ ಹೊಂದಿದ ನಂತರವೂ ಪ್ರಾಧಿಕಾರದ ವಸತಿ ಗೃಹವನ್ನು ತೆರವು ಮಾಡದೇ ದುರ್ನಡತೆ ಎಸಗಿದ ಆರೋಪಕ್ಕಾಗಿ ಶ್ರೀ ಕೆ.ಎಂ.ಚಂದ್ರೇಗೌಡ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರಿಗೆ ದಿ:25.01.03ರಂದು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ರನ್ವಯ ಮೇಲೆ (1)ರಲ್ಲಿ ಓದಲಾದ ನೋಟೀಸ್ ನೀಡಿ ಸಮಜಾಯಿಷಿ ಕೇಳಲಾಗಿತ್ತು. ಸದರಿ ಅಧಿಕಾರಿಯವರು ಈ ನೋಟೀಸಿಗೆ ದಿ:04.03.03ರಂದು ತಮ್ಮ ಮೇಲೆ ಮಾಡಲಾದ ಆರೋಪಗಳನ್ನು ನಿರಾಕರಿಸಿ ಮೇಲೆ (2)ರಲ್ಲಿ ಓದಲಾದ ಉತ್ತರ ನೀಡಿರುತ್ತಾರೆ. ಸದರಿ ಅಧಿಕಾರಿಯವರು ನೀಡಿರುವ ಉತ್ತರದಲ್ಲಿ ಆರೋಪಗಳನ್ನು ನಿರಾಕರಿಸಿದ ಕಾರಣ ಅವುಗಳಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ತೀರ್ಮಾನಿಸಿ ಮೇಲೆ (3)ರಲ್ಲಿ ಓದಲಾದ ದಿ:05.08.03ರ ಸರ್ಕಾರಿ ಆದೇಶದಲ್ಲಿ ಶ್ರೀ ಕೆ.ಕೃಷ್ಣನ್ಯಾಕ್, ನಿವೃತ್ತ ನ್ಯಾಯಾಧೀಶರು, ಮೈಸೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು.

ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (4)ರಲ್ಲಿ ಓದಲಾದ ದಿ:13.07.04ರ ವಿಚಾರಣಾ ವರದಿಯನ್ನು ಸಲ್ಲಿಸಿ ಸದರಿ ಅಧಿಕಾರಿಯವರ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿರುವುದಿಲ್ಲವೆಂಬ ನಿರ್ಣಯ ನೀಡಿರುತ್ತಾರೆ.

ಶ್ರೀ ಕೆ.ಎಂ.ಚಂದ್ರೇಗೌಡ, ಕೆಎಎಸ್ ಅಧಿಕಾರಿ ಅವರು 1998ರ ಆಗಸ್ಟ್‌ನಿಂದ 25.07.04ರ ತನಕ ಮೈಸೂರಿನಲ್ಲೇ ವಿವಿಧ ಕಛೇರಿಗಳ ಹುದ್ದೆಯಲ್ಲಿ ಕೆಲಸ ನಿರ್ವಹಿಸಿ ದಿ:26.07.04ರಿಂದ ಮತ್ತೆ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಲ್ಲಿ ಕಾರ್ಯದರ್ಶಿಯಾಗಿ ವರ್ಗಾವಣೆ ಹೊಂದಿರುವರು. ಆದುದರಿಂದ ಆರೋಪಿತ ಅಧಿಕಾರಿಯವರು ಅದೇ ಸರ್ಕಾರಿ ವಸತಿ ಗೃಹದಲ್ಲಿ ಮುಂದುವರಿದಿರುವುದರಿಂದ ಸರ್ಕಾರಕ್ಕೆ ಯಾವುದೇ ನಷ್ಟವುಂಟಾಗಿರುವುದಿಲ್ಲ. ವಿಚಾರಣಾಧಿಕಾರಿಯಿಂದ ಸ್ವೀಕರಿಸಲಾದ ವಿಚಾರಣಾ ವರದಿಯನ್ನು ಪರಿಶೀಲಿಸಿದ ಸರ್ಕಾರವು ಅದನ್ನು ಒಪ್ಪಿಕೊಂಡು ಅವರಿಗೆ ಆಡಳಿತಾತ್ಮಕ ಎಚ್ಚರಿಕೆಯನ್ನು ನೀಡುವುದರ ಮೂಲಕ ಅವರ ವಿರುದ್ಧ ಮಾಡಲಾದ ಆರೋಪದಿಂದ ಅವರನ್ನು ಆರೋಪಮುಕ್ತರನ್ನಾಗಿಸಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 127 ಎಸ್‌ಇಎನ್ 02, ಬೆಂಗಳೂರು, ದಿನಾಂಕ: 23ನೇ ಡಿಸೆಂಬರ್ 2006.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು ಶ್ರೀ ಕೆ.ಎಂ.ಚಂದ್ರೇಗೌಡ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರನ್ನು ದಿ:25.01.03ರ ನೋಟೀಸಿನಲ್ಲಿ ಮಾಡಲಾದ ಆರೋಪಗಳಿಂದ ಆರೋಪಮುಕ್ತರನ್ನಾಗಿಸುತ್ತದೆ ಹಾಗೂ ಇನ್ನು ಮುಂದೆ ಈ ರೀತಿಯ ಪ್ರಸಂಗಗಳಿಗೆ ಅವಕಾಶ ನೀಡದಂತೆ ಎಚ್ಚರಿಕೆ ವಹಿಸುವಂತೆ ಈ ಮೂಲಕ ತಿಳಿಸಲಾಗಿದೆ.

ಈ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 11 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ವಿಷಯ:** ಶ್ರೀ ಎಂ.ಕೃಷ್ಣ, ಕೆಎಎಸ್ (ಆಯ್ಕೆ ಶ್ರೇಣಿ) ಅಧಿಕಾರಿ ಅವರ ವಿರುದ್ಧ ಇಲಾಖಾ ವಿಚಾರಣೆ-ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 76 ಎಸ್‌ಇಎನ್ 04 ದಿ:23.06.05.
2) ಶ್ರೀ ಜಿ.ನಂದಕುಮಾರ್, ನಿವೃತ್ತ ಡಿಸ್ಟ್ರಿಕ್ಟ್ ಅಂಡ್ ಸೆಷನ್ಸ್ ಜಡ್ಜ್, ಬೆಂಗಳೂರು ಅವರ ದಿ:23.01.06ರ ವಿಚಾರಣಾ ವರದಿ.

3) 2ನೇ ನೋಟೀಸ್ ಸಂಖ್ಯೆ:ಸಿಆಸುಇ 76 ಎಸ್‌ಇಎನ್ 04 ದಿ: 09.03.06.

4) ಶ್ರೀ ಎಂ.ಕೃಷ್ಣ, ಕೆಎಎಸ್ (ಆಯ್ಕೆ ಶ್ರೇಣಿ) ಅಧಿಕಾರಿ ಅವರ ಉತ್ತರ ದಿ: 04.08.06.

**ಪ್ರಸ್ತಾವನೆ:**

ಶ್ರೀ ಎಂ.ಕೃಷ್ಣ, ಕೆಎಎಸ್ (ಆಯ್ಕೆ ಶ್ರೇಣಿ) ಅಧಿಕಾರಿ ಅವರು ತುಮಕೂರು ಜಿಲ್ಲಾ ತರಬೇತಿ ಸಂಸ್ಥೆಯ ಪ್ರಾಚಾರ್ಯರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಚಿಕ್ಕನಾಯಕನಹಳ್ಳಿ ವಿಧಾನಸಭಾ ಕ್ಷೇತ್ರಕ್ಕೆ ಚುನಾವಣಾಧಿಕಾರಿಯಾಗಿ ಮತ್ತು ತುಮಕೂರು ಲೋಕಸಭಾ ಕ್ಷೇತ್ರಕ್ಕೆ ಸಹಾಯಕ ಚುನಾವಣಾಧಿಕಾರಿಯಾಗಿ ನೇಮಕಗೊಂಡಿದ್ದ ಸಂದರ್ಭದಲ್ಲಿ ಅವರು ಸದರಿ ಕರ್ತವ್ಯವನ್ನು ನಿರ್ವಹಿಸದೇ ಬೇಜವಾಬ್ದಾರಿಯಿಂದ ವರ್ತಿಸಿ ಕರ್ತವ್ಯಲೋಪ ಎಸಗಿದ ಆರೋಪಕ್ಕಾಗಿ ಮೇಲೆ (1)ರಲ್ಲಿ ಓದಲಾದ ದಿ:23.06.05ರ ಸರ್ಕಾರಿ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಶ್ರೀ ಜಿ.ನಂದಕುಮಾರ್, ನಿವೃತ್ತ ಡಿಸ್ಟ್ರಿಕ್ಟ್ ಅಂಡ್ ಸೆಷನ್ಸ್ ಜಡ್ಜ್, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಗಳಾಗಿ ನೇಮಿಸಲಾಯಿತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2)ರಲ್ಲಿ ಓದಲಾದ ದಿ:23.01.06ರ ವಿಚಾರಣಾ ವರದಿ ಸಲ್ಲಿಸಿ ಈ ಕೆಳಕಂಡಂತೆ ವರದಿ ನೀಡಿರುತ್ತಾರೆ.

ಶ್ರೀ ಎಂ.ಕೃಷ್ಣ, ಕೆಎಎಸ್ ಅಧಿಕಾರಿಯವರನ್ನು ಚಿಕ್ಕನಾಯಕನಹಳ್ಳಿ ವಿಧಾನಸಭಾ ಕ್ಷೇತ್ರದ ಚುನಾವಣಾಧಿಕಾರಿಯಾಗಿ ಮತ್ತು ತುಮಕೂರು ಲೋಕಸಭಾ ಕ್ಷೇತ್ರಕ್ಕೆ ಸಹಾಯಕ ಚುನಾವಣಾಧಿಕಾರಿಯಾಗಿ ನೇಮಕಗೊಂಡಿದ್ದು, ಆ ಚುನಾವಣೆಗೆ ಸಂಬಂಧಿಸಿದಂತೆ ಪೂರ್ವಭಾವಿ ಸಿದ್ಧತೆ ಕುರಿತು ದಿ:06.03.04ರಂದು ಜಿಲ್ಲಾ ಚುನಾವಣಾಧಿಕಾರಿಗಳು ಹಾಗೂ ತುಮಕೂರು ಜಿಲ್ಲಾಧಿಕಾರಿಗಳು ಸಭೆಯನ್ನು ಕರೆದಿದ್ದರು. ಆ ಸಭೆಗೆ ಹಾಜರಾಗುವಂತೆ ದಿ:01.03.04ರ ಸಭಾ ತಿಳುವಳಿಕೆ ಪತ್ರವನ್ನು ದಿ:03.03.04ರಂದು

ಜಾರಿಗೊಳಿಸಲಾಗಿತ್ತು. ಚುನಾವಣೆ ಪ್ರಕ್ರಿಯೆ ಪ್ರಾರಂಭಗೊಂಡ ನಂತರ ಚುನಾವಣೆ ಕೆಲಸದ ನಿಮಿತ್ತ ಅವರು ಕೇಂದ್ರಸ್ಥಾನವನ್ನು ಬಿಡದಿರಲು ಮತ್ತು ಅವಶ್ಯಕ ಸಂದರ್ಭಗಳಲ್ಲಿ ಕೇಂದ್ರಸ್ಥಾನವನ್ನು ಬಿಡಬೇಕಾದ ಸಂದರ್ಭದಲ್ಲಿ ದೂರವಾಣಿ ಸಂಪರ್ಕದ ಮಾಹಿತಿಯನ್ನು ಕಛೇರಿಯಲ್ಲಿ ಬಿಡಲು ಸೂಚಿಸಿದ್ದಾಗ್ಯೂ ಸದರಿ ಅಧಿಕಾರಿಯವರು ಯಾವುದೇ ಪೂರ್ವಾನುಮತಿ ಪಡೆಯದೇ ದಿ:06.03.04ರಂದು ಕರ್ತವ್ಯಕ್ಕೆ ಗೈರು ಹಾಜರಾಗಿರುತ್ತಾರೆ. ನಂತರ ದಿ:11.03.04 ರಿಂದ 10.05.04ರವರೆಗೆ ವೈದ್ಯಕೀಯ ಕಾರಣದ ಮೇಲೆ ರಜೆ ಮಂಜೂರಾತಿಯನ್ನು ಕೋರಿ ಮಹಾನಿರ್ದೇಶಕರು, ಆಡಳಿತ ತರಬೇತಿ ಸಂಸ್ಥೆ, ಮೈಸೂರು ಅವರಿಗೆ ಪತ್ರ ಬರೆದು ಅದರ ಕುರಿತಂತೆ ಮಾಹಿತಿಯನ್ನು ತುಮಕೂರು ಜಿಲ್ಲಾಧಿಕಾರಿಗಳ ಕಛೇರಿಗೆ ಹಾಗೂ ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಅದರಲ್ಲಿ ದಿ:09.03.04ರಂದು ಬೆಂಗಳೂರಿನ ಕೆ.ಸಿ.ಜನರಲ್ ಆಸ್ಪತ್ರೆಯಲ್ಲಿ ಹೊರರೋಗಿ ವಿಭಾಗದಲ್ಲಿ ನೊಂದಾಯಿಸಿಕೊಂಡು ಚಿಕಿತ್ಸೆ ಪಡೆದಿರುವುದು ಕಂಡು ಬರುತ್ತದೆ. ಇದರಿಂದ ಅಂದು ಅವರು ಕೇಂದ್ರಸ್ಥಾನದಲ್ಲಿ ಇಲ್ಲದಿರುವುದು ವ್ಯಕ್ತವಾಗಿರುವುದರಿಂದ ಅವರ ವಿರುದ್ಧ ಮಾಡಲಾದ 2 ಆರೋಪಗಳು ಸಾಬೀತಾಗಿವೆಯೆಂಬ ನಿರ್ಣಯ ನೀಡಿರುತ್ತಾರೆ.

ಮೇಲ್ಕಂಡ ವಿಚಾರಣಾ ವರದಿಯನ್ನು ಪರಿಶೀಲಿಸಲಾಯಿತು ಹಾಗೂ ಶ್ರೀ ಎಂ.ಕೃಷ್ಣ, ಕೆಎಎಸ್ ಅಧಿಕಾರಿ ಅವರಿಗೆ ಮೇಲೆ (3)ರಲ್ಲಿ ಓದಲಾದ ದಿ:09.03.06ರ 2ನೇ ನೋಟೀಸ್‌ನೊಡನೆ ವಿಚಾರಣಾ ವರದಿಯನ್ನು ಕಳುಹಿಸಿ ಈ ಬಗ್ಗೆ ಅಹವಾಲು ಏನಾದರು ಇದ್ದಲ್ಲಿ ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು. ಸದರಿ ಅಧಿಕಾರಿಯವರು ನೋಟೀಸಿಗೆ ಮೇಲೆ (4)ರಲ್ಲಿ ಓದಲಾದ ದಿ:04.08.06ರ ಉತ್ತರ ಸಲ್ಲಿಸಿ ವಿಚಾರಣಾಧಿಕಾರಿಯವರು ವಿಚಾರಣಾ ವರದಿಯನ್ನು ಯಾವುದೇ ನಿಯಮಗಳನ್ನು ಪಾಲಿಸಿರುವುದಿಲ್ಲ ಹಾಗೂ ನ್ಯಾಯಯುತವಾಗಿ ವಿಚಾರಣೆ ನಡೆಸಿರುವುದಿಲ್ಲವಾದ್ದರಿಂದ ವಿಚಾರಣಾ ವರದಿಯನ್ನು ತಿರಸ್ಕರಿಸಿ ದಂಡನೆಯನ್ನು ವಿಧಿಸಬಾರದೆಂದು ಕೋರಿರುತ್ತಾರೆ. ಸದರಿ ಅಧಿಕಾರಿಯವರು ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯನ್ನು ತಿರಸ್ಕರಿಸುವಂತೆ ಕೋರಿದ್ದರಾದರೂ ಅದಕ್ಕೆ ಸಂಬಂಧಿಸಿದಂತೆ ಯಾವುದೇ ದಾಖಲೆಗಳನ್ನು ಸಲ್ಲಿಸಿರುವುದಿಲ್ಲ. ಇದರಿಂದಾಗಿ ಕೇವಲ ಔಪಚಾರಿಕವಾಗಿ ವಿಚಾರಣಾ ವರದಿಯನ್ನು ತಿರಸ್ಕರಿಸುತ್ತಿದ್ದಾರೆಂದು ಭಾವಿಸಬಹುದಾಗಿದೆ. ಆದುದರಿಂದ ಅವರ ಉತ್ತರದಲ್ಲಿ ಮನಗಾಣುವಂತಹ ಯಾವುದೇ ಅಂಶಗಳು ಇಲ್ಲದೇ ಇರುವುದರಿಂದ ಅವರ ಉತ್ತರವನ್ನು ಒಪ್ಪದೇ ವಿಚಾರಣಾ ವರದಿಯನ್ನು ಒಪ್ಪಿ ಅವರಿಗೆ ದಂಡನೆ ವಿಧಿಸಲು ತೀರ್ಮಾನಿಸಿದ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 76 ಎಸ್‌ಇಎನ್ 2004 ಬೆಂಗಳೂರು ದಿನಾಂಕ: 22ನೇ ಡಿಸೆಂಬರ್ 2006.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರವು ಶ್ರೀ ಎಂ. ಕೃಷ್ಣ, ಕೆಎಎಸ್ (ಆಯ್ಕೆ ಶ್ರೇಣಿ) ಅಧಿಕಾರಿ ಅವರಿಗೆ ಸಂಬಂಧಿಸಿದಂತೆ

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8 (iv-ಎ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅವರಿಗೆ ಈ ಕೆಳಗಿನಂತೆ ದಂಡನೆ ವಿಧಿಸುತ್ತದೆ.

(ಅ) ವೇತನ ಶ್ರೇಣಿ ರೂ.12800-16720ರಲ್ಲಿ ಅವರು ಹಾಲಿ ಪಡೆಯುತ್ತಿರುವ ವೇತನದಿಂದ 2 ಹಂತ ಕೆಳಗೆ ಸಂಚಿತ ಪರಿಣಾಮ ಬೀರದಂತೆ (without cumulative effect) 2 ವರ್ಷಗಳ ಅವಧಿಗೆ ಇಳಿಸುತ್ತದೆ.

(ಆ) ಈ ಅವಧಿಯಲ್ಲಿ ಅವರ ವೇತನವು ಸ್ಥಿರವಾಗಿರುತ್ತದೆ.

(ಇ) ಈ ದಂಡನಾವಧಿಯು ಮುಗಿದ ನಂತರ ದಂಡನೆಯು ಸಂಚಿತ ಪರಿಣಾಮ ಹೊಂದದೇ ಇರುವುದರಿಂದ ಅವರ ವೇತನ ಬಡ್ತಿ ಮುಂದೂಡುವ ಪರಿಣಾಮ ಬೀರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 24

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ವಿಷಯ:** ಶ್ರೀ ಎಸ್.ಜಿ.ಬಿರಾದಾರ್, ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 214ರಡಿ ಕ್ರಮ ಕೈಗೊಳ್ಳುವ ಬಗ್ಗೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 171 ಎಸ್ಇಎನ್ 06 ಬೆಂಗಳೂರು , ದಿನಾಂಕ: 23ನೇ ಡಿಸೆಂಬರ್ 2006.**

ಶ್ರೀ ಎಸ್.ಜಿ.ಬಿರಾದಾರ್, ನಿವೃತ್ತ ಕೆಎಎಸ್ ಅಧಿಕಾರಿ ಅವರು ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆಯಲ್ಲಿ ಆಯುಕ್ತರಾಗಿ ಕಾರ್ಯನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಹುಬ್ಬಳ್ಳಿ-ಧಾರವಾಡ ಮಹಾನಗರ ಪಾಲಿಕೆ 6 ತುಂಡು ಕಾಮಗಾರಿಗಳಿಗೆ ಸಂಬಂಧಿಸಿದ ರೂ.8,65,434/-ಗಳ ಬಿಲ್ಲುಗಳನ್ನು ಶ್ರೀ ಪಿ.ವಿ.ಪೋತೆದಾರ್ ಇವರಿಗೆ ಪಾವತಿಸಿರುವ ಪ್ರಕರಣದಲ್ಲಿ ತಪ್ಪಿತಸ್ಥರಾದ ಪಾಲಿಕೆ ಅಧಿಕಾರಿಗಳ ಮೇಲೆ ಸರ್ಕಾರದ ಆದೇಶ ಸಂಖ್ಯೆ:ನಅಇ 171 ಎಹೆಚ್‌ಡಿ 02 ದಿ:22.04.03ರಂದು ಇಲಾಖಾ ವಿಚಾರಣೆ ನಡೆಸಲು ಆದೇಶ ಹೊರಡಿಸಲಾಗಿದ್ದು, ಅದರಂತೆ ಸಕಾಲದಲ್ಲಿ ಕ್ರಮ ಕೈಗೊಳ್ಳದೇ ಮೂಲಕ ಕರ್ತವ್ಯಲೋಪವೆಸಗಿರುವುದು ಸರ್ಕಾರದ ಗಮನಕ್ಕೆ ಬಂದಿರುವುದರಿಂದಲೂ,

ಮೇಲ್ಕಂಡ ದುರ್ನಡತೆಗಾಗಿ ಶ್ರೀ ಎಸ್.ಜಿ.ಬಿರಾದಾರ್, ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧ ಶಿಸ್ತು ಕ್ರಮ ಪ್ರಾರಂಭಿಸಬೇಕೆಂದು ಸರ್ಕಾರ ಭಾವಿಸಿರುವುದರಿಂದಲೂ,

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 1958ರ ನಿಯಮ 214ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಸ್.ಜಿ.ಬಿರಾದಾರ್, ನಿವೃತ್ತ ಕೆಎಎಸ್ ಅಧಿಕಾರಿ ಅವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ಇಲಾಖಾ ವಿಚಾರಣೆ ನಡೆಸಬೇಕೆಂದು ಹಾಗೂ ಈ ವಿಚಾರಣೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಯ ನಿಯಮ 11,11-ಎ ರಲ್ಲಿ ನಿಗಧಿಪಡಿಸಿದ ಕಾರ್ಯವಿಧಾನವನ್ನು ಅನುಸರಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ರಘುರಾಮ್ ಭಂಡಾರಿ**
ಪಿ.ಆರ್. 23 ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ವಿಷಯ:** ಶ್ರೀ ಕೆ.ಎಸ್.ವೆಂಕಟೇಶಪ್ಪ, ಕೆಎಎಸ್ ಅಧಿಕಾರಿ ಮತ್ತು ಶ್ರೀ ಜಿ.ಲಿಂಗಪ್ಪ, ಹಿಂದಿನ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳು, ಶ್ರೀ ಎ.ವಿಶ್ವನಾಥ್, ಶ್ರೀ ಎ.ಆರ್ನೆಸ್ಟ್ ಮತ್ತು ಶ್ರೀ ರೆಹಮಾನ್, ಹಿಂದಿನ ಕಿರಿಯ ಇಂಜಿನಿಯರ್‌ಗಳು, ಕ್ಷೇತ್ರಾಭಿವೃದ್ಧಿ ಅಧಿಕಾರಿ ಕಛೇರಿ, ದೊಡ್ಡಬಳ್ಳಾಪುರ ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ-ಮುಕ್ತಾಯಗೊಳಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) ನೋಟೀಸ್ ಸಂಖ್ಯೆ:ಆರ್‌ಡಿಪಿ 121 ಇಎನ್‌ಕ್ಯೂ 96 ದಿ:16.08.96.
2) ನೋಟೀಸ್ ಸಂಖ್ಯೆ:ಸಿಆಸುಇ 97 ಎಸ್ಇಎನ್ 97 ದಿ:11.12.97.
3) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 97 ಎಸ್ಇಎನ್ 97 ದಿ:03.09.98.
4) ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 97 ಎಸ್ಇಎನ್ 97 ದಿ:13.10.03.
5) ಬೆಂಗಳೂರು ನಗರ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಹಾಗೂ ವಿಚಾರಣಾಧಿಕಾರಿಗಳು ಅವರ ದಿ:22.09.06ರ ವಿಚಾರಣಾ ವರದಿ.

**ಪ್ರಸ್ತಾವನೆ:-**

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರ ತಾಲ್ಲೂಕಿನಲ್ಲಿ ಕಪ್ಪು ಹಲಗೆ ಯೋಜನೆಯಡಿಯಲ್ಲಿ 1991-92 ಮತ್ತು 1992-93ನೇ ಸಾಲಿನಲ್ಲಿ ಕೈಗೊಂಡ ಶಾಲಾ ಕಟ್ಟಡಗಳ ನಿರ್ಮಾಣ ಕಾಮಗಾರಿಯು ಕಳಪೆ ಗುಣಮಟ್ಟದ್ದಾಗಿದ್ದು, ಹಾಗೂ ಅನೇಕ ಶಾಲಾ ಕಟ್ಟಡಗಳು ಪೂರ್ಣವಾಗದೆಯೇ ಹೆಚ್ಚು ಹಣ ಸಂದಾಯವಾಗಿದ್ದು, ತೀವ್ರತರ ಸರ್ಕಾರಿ ಹಣ ದುರುಪಯೋಗ
ವಾಗುವುದಕ್ಕೆ ಕಾರಣರಾದ ಆರೋಪಕ್ಕೆ ಸಂಬಂಧಿಸಿದಂತೆ ಈ ಕೆಳಕಂಡ ಅಧಿಕಾರಿ/ನೌಕರರುಗಳಿಗೆ ಮೇಲೆ (1) ಮತ್ತು (2)ರಲ್ಲಿ ಓದಲಾದ ದಿ:16.08.96 ಮತ್ತು 11.12.97ರಂದು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ರಡಿ ಸಮಜಾಯಿಷಿಯನ್ನು ಕೇಳುವುದರ ಮೂಲಕ ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು.

1) ಶ್ರೀ ಕೆ.ಎಸ್.ವೆಂಕಟೇಶಪ್ಪ, ಕೆಎಎಸ್, ಹಿಂದಿನ ಕ್ಷೇತ್ರಾಭಿವೃದ್ಧಿ ಅಧಿಕಾರಿ, ದೊಡ್ಡಬಳ್ಳಾಪುರ.
2) ಶ್ರೀ ಜಿ.ಲಿಂಗಪ್ಪ, ಹಿಂದಿನ ಕ್ಷೇತ್ರಾಭಿವೃದ್ಧಿ ಅಧಿಕಾರಿ, ದೊಡ್ಡಬಳ್ಳಾಪುರ.
3) ಶ್ರೀ ಎ.ಆರ್ನೆಸ್ಟ್, ಹಿಂದಿನ ಕಿರಿಯ ಇಂಜಿನಿಯರ್, ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಕಛೇರಿ, ದೊಡ್ಡಬಳ್ಳಾಪುರ.
4) ಶ್ರೀ ಎ.ವಿಶ್ವನಾಥ್, ಹಿಂದಿನ ಕಿರಿಯ ಇಂಜಿನಿಯರ್, ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಕಛೇರಿ, ದೊಡ್ಡಬಳ್ಳಾಪುರ.
5) ಶ್ರೀ ರೆಹಮಾನ್, ಹಿಂದಿನ ಕಿರಿಯ ಇಂಜಿನಿಯರ್, ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಕಛೇರಿ, ದೊಡ್ಡಬಳ್ಳಾಪುರ.

ನೋಟೀಸಿಗೆ ಮೇಲ್ಕಂಡ ಅಧಿಕಾರಿ/ನೌಕರರುಗಳಿಂದ ಉತ್ತರವನ್ನು ಪಡೆಯಲಾಗಿದ್ದು, ಅವರುಗಳು ಸಲ್ಲಿಸಿದ ಉತ್ತರಗಳಲ್ಲಿ ಯಾವುದೇ ಮನಗಾಣುವಂತಹ ಅಂಶಗಳು ಇಲ್ಲದೇ ಇದ್ದುದರಿಂದ ಅವರುಗಳ ವಿರುದ್ಧ ಮಾಡಲಾದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಮುಂದುವರಿಸಲು ತೀರ್ಮಾನಿಸಿ ಮೇಲೆ (3)ರಲ್ಲಿ ಓದಲಾದ ದಿ:03.09.98ರ ಸರ್ಕಾರಿ ಆದೇಶದಲ್ಲಿ ಬೆಂಗಳೂರು ನಗರ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು.

ಮೇಲ್ಕಂಡ ಆರೋಪಿತ ಅಧಿಕಾರಿ/ನೌಕರರುಗಳಲೊಬ್ಬರಾದ ಶ್ರೀ ಜಿ.ಲಿಂಗಪ್ಪ ಅವರು ವಿಚಾರಣೆ ಬಾಕಿ ಇರುವಾಗಲೇ ದಿ:16.04.02ರಂದು ಮೃತಪಟ್ಟಿದ್ದರಿಂದ ಮೇಲೆ (4)ರಲ್ಲಿ ಓದಲಾದ ದಿ:13.10.03ರ ಸರ್ಕಾರಿ ಆದೇಶದಲ್ಲಿ ಅವರ ವಿರುದ್ಧದ

ಇಲಾಖಾ ವಿಚಾರಣೆಯನ್ನು ಮುಕ್ತಾಯಗೊಳಿಸಿ ಆದೇಶ ಹೊರಡಿಸಲಾಯಿತು.

ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳಾದ ಬೆಂಗಳೂರು ನಗರ ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು ಮೇಲೆ (5)ರಲ್ಲಿ ಓದಲಾದ ದಿ:22.09.06ರಂದು ವಿಚಾರಣಾ ವರದಿಯನ್ನು ಸಲ್ಲಿಸಿ ಈ ಕೆಳಕಂಡಂತೆ ನಿರ್ಣಯವನ್ನು ನೀಡಿರುತ್ತಾರೆ.

"ಶ್ರೀ ಜಿ.ಲಿಂಗಪ್ಪ ಅವರು ನಿಧನ ಹೊಂದಿದ್ದ ಪ್ರಯುಕ್ತ ಅವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಮುಕ್ತಾಯಗೊಳಿಸಿ ಆದೇಶಿಸಲಾಗಿದೆ. ಕಿರಿಯ ಇಂಜಿನಿಯರ್‌ಗಳಾದ ಶ್ರೀ ಎ.ಆರ್ನೆಸ್ಟ್, ಶ್ರೀ ಎ.ವಿಶ್ವನಾಥ್ ಹಾಗೂ ಶ್ರೀ ಎ.ರೆಹಮಾನ್ ಅವರುಗಳಿಗೆ ವಿಚಾರಣೆಗೆ ಹಾಜರಾಗುವಂತೆ ನೋಟೀಸ್ ಜಾರಿ ಮಾಡಲು ವಿಳಾಸ ಲಭ್ಯವಿಲ್ಲದ ಕಾರಣ ಬೆಂಗಳೂರು ಗ್ರಾಮಾಂತರ ಜಿಲ್ಲಾ ಪಂಚಾಯತ್ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳ ಮುಖಾಂತರ ದಿ:30.10.03, 22.01.04, 10.06.04 ಮತ್ತು 04.07.06 ನೋಟೀಸ್ ಜಾರಿ ಮಾಡಲಾಗಿದ್ದರೂ ಇಲಾಖಾ ವಿಚಾರಣೆಗೆ ಹಾಜರಾಗಿರುವುದಿಲ್ಲ. ಹೀಗಾಗಿ ಇವರುಗಳ ವಿರುದ್ಧ ಇಲಾಖಾ ವಿಚಾರಣೆಯನ್ನು ನಡೆಸಲು ಸಾಧ್ಯವಾಗಿರುವುದಿಲ್ಲ.

ಶ್ರೀ ಕೆ.ಎಸ್.ವೆಂಕಟೇಶಪ್ಪ, ಕೆಎಎಸ್ ಅಧಿಕಾರಿ ಅವರು ದೊಡ್ಡಬಳ್ಳಾಪುರ ತಾಲ್ಲೂಕು ಪಂಚಾಯಿತಿ ಕ್ಷೇತ್ರಾಭಿವೃದ್ಧಿ ಅಧಿಕಾರಿಗಳಾಗಿ 1991 ಮತ್ತು 1992ರ ಅವಧಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಕಪ್ಪು ಹಲಗೆ ಯೋಜನೆಯಡಿಯಲ್ಲಿ ಹಣ ದುರುಪಯೋಗವಾಗಿರುವುದಾಗಿ ಆರೋಪ ಪಟ್ಟಿಯನ್ನು ದಿ:11.12.97ರಲ್ಲಿ ಸದರಿ ಅಧಿಕಾರಿಗೆ ಜಾರಿ ಮಾಡಲಾಗಿದೆ. ಅಂದರೆ ಪ್ರಕರಣ ನಡೆದು 5 ವರ್ಷಗಳ ನಂತರ ಆರೋಪ ಪಟ್ಟಿಯನ್ನು ಜಾರಿ ಮಾಡಿರುವುದು ಸ್ಪಷ್ಟವಾಗುತ್ತದೆ. ಹಾಗೂ ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಆಪಾದಿತ ಅಧಿಕಾರಿಯು ಕೋರಿರುವ ದಾಖಲೆಗಳನ್ನು ನೀಡಲು ಸಕ್ಷಮ ಪ್ರಾಧಿಕಾರಿಯು ವಿಫಲವಾಗಿರುತ್ತದೆ. ಹಾಗೂ ಈ ಪ್ರಕರಣದಲ್ಲಿ ಸಾಕ್ಷಿ ಹೇಳಿಕೆ ನೀಡಲು ಸಾಕ್ಷಿದಾರರು ಹಾಜರಾಗಿರುವುದಿಲ್ಲ. ಮಂಡನಾಧಿಕಾರಿಗಳು ತಮ್ಮ ಲಿಖಿತ ಹೇಳಿಕೆಯಲ್ಲಿ ಈಗಾಗಲೇ ಪ್ರಕರಣವು ವಿಳಂಬವಾಗಿರುವುದರಿಂದ ಶ್ರೀ ಕೆ.ಎಸ್.ವೆಂಕಟೇಶಪ್ಪ ಇವರು ಪ್ರಕರಣದ ವಿಳಂಬದ ಬಗ್ಗೆ ಕೆ.ಎ.ಟಿ. ಮುಂದೆ ಅರ್ಜಿ ಸಲ್ಲಿಸಿರುವುದರಿಂದ ಈ ಪ್ರಕರಣವನ್ನು ಮುಕ್ತಾಯಗೊಳಿಸಲು ಕೋರಿರುತ್ತಾರೆ. ಈ ಕಾರಣದ ಹಿನ್ನೆಲೆಯಲ್ಲಿ ಆರೋಪಿತ ಅಧಿಕಾರಿಯಾದ ಶ್ರೀ ಕೆ.ಎಸ್.ವೆಂಕಟೇಶಪ್ಪ ಇವರ ವಿರುದ್ಧ ಮಾಡಲಾದ ಆರೋಪವನ್ನು ದೃಢೀಕರಿಸಲು ಯಾವುದೇ ಸಾಕ್ಷ್ಯಾಧಾರಗಳು ಲಭ್ಯವಿಲ್ಲದ ಕಾರಣ ಈ ಆರೋಪ ಸಾಬೀತಾಗುವುದಿಲ್ಲವೆಂದು ಪರಿಗಣಿಸಲಾಗಿದೆ."

ವಿಚಾರಣಾ ವರದಿಯನ್ನು ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಈ ಪ್ರಕರಣದಲ್ಲಿನ ಜಂಟಿ ಇಲಾಖಾ ವಿಚಾರಣೆಗೆ ಸಂಬಂಧಪಟ್ಟಂತೆ ಅಗತ್ಯ ದಾಖಲೆಗಳು ಮತ್ತು ಸಾಕ್ಷ್ಯಾಧಾರಗಳ ಕೊರತೆಯ ಕಾರಣ ವಿವರವಾಗಿ ವಿಚಾರಣೆ ನಡೆಸದೆ ಹಲವಾರು ಬಾರಿ ವಿಚಾರಣೆಯು ಮುಂದೂಡಲ್ಪಟ್ಟಿರುತ್ತದೆ. ಆಪಾದಿತ ಅಧಿಕಾರಿ/ನೌಕರರುಗಳು 1991-92ರ ಸಾಲಿನಲ್ಲಿ ದೊಡ್ಡಬಳ್ಳಾಪುರ ಕ್ಷೇತ್ರಾಭಿವೃದ್ಧಿ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಕಪ್ಪು ಹಲಗೆ ಯೋಜನೆಯಡಿಯಲ್ಲಿನ ಹಣ ದುರುಪಯೋಗದ ಆರೋಪ ಪಟ್ಟಿಯನ್ನು ದಿ:11.12.97ರಂದು ಜಾರಿ ಮಾಡಲಾಗಿದೆ. ಆಪಾದಿತ ಅಧಿಕಾರಿಯು ಕೋರಿದ ದಾಖಲೆಗಳನ್ನು ನಿಯಮಾನುಸಾರ ಒದಗಿಸಲು ಸಕ್ಷಮ ಪ್ರಾಧಿಕಾರವು ವಿಫಲವಾಗಿರುತ್ತದೆ ಹಾಗೂ ವಿಚಾರಣಾ ವೇಳೆಯಲ್ಲಿ ಸಾಕ್ಷಿ ನೀಡಲು ಸಾಕ್ಷಿದಾರರು ಹಾಜರಾಗಿರುವುದಿಲ್ಲ. ಪ್ರಕರಣವು ನಡೆದು ಸುಮಾರು 15 ವರ್ಷಗಳ ಕಾಲ ಮೀರಿರುವುದರಿಂದ ಹಾಗೂ ಆಪಾದಿತ ಅಧಿಕಾರಿ/ನೌಕರರುಗಳ ವಿರುದ್ಧ ಸಾಬೀತುಪಡಿಸುವ ದಾಖಲೆಗಳು ಮತ್ತು ಸಾಕ್ಷ್ಯಾಧಾರಗಳನ್ನು ಒದಗಿಸಲು ಆಡಳಿತ ಇಲಾಖೆ ಮತ್ತು ಸಕ್ಷಮ ಪ್ರಾಧಿಕಾರದ ಎಲ್ಲಾ ಪ್ರಯತ್ನಗಳು ನಿಷ್ಫಲವಾಗಿರುವ ಹಿನ್ನೆಲೆಯಲ್ಲಿ ಹಾಗೂ ವಿಚಾರಣೆಗೆ ಸಂಬಂಧಪಟ್ಟ ಅಗತ್ಯ ದಾಖಲೆಗಳು ಮತ್ತು ಸಾಕ್ಷ್ಯಾಧಾರಗಳು ಇಲ್ಲದೇ ಇರುವುದರಿಂದ ಆರೋಪಿತ ಅಧಿಕಾರಿ/ನೌಕರರುಗಳ ವಿರುದ್ಧ ಮಾಡಲಾದ ಆರೋಪಗಳನ್ನು ಸಾಬೀತುಪಡಿಸಲು ಸಾಧ್ಯವಾಗದೇ ಇರುವ ಹಿನ್ನೆಲೆಯಲ್ಲಿ ಶ್ರೀ ಕೆ.ಎಸ್.ವೆಂಕಟೇಶಪ್ಪ ಮತ್ತು ಇತರ ಮೂವರು ಆರೋಪಿತರುಗಳ ವಿರುದ್ಧ ಇರುವ ಜಂಟಿ ಇಲಾಖಾ ವಿಚಾರಣೆಯನ್ನು ಮುಕ್ತಾಯಗೊಳಿಸುವುದು ಸೂಕ್ತವೆಂದು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಎಸ್‌ಇಎನ್ 97 ಬೆಂಗಳೂರು ದಿನಾಂಕ: 3ನೇ ಜನವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಸರ್ಕಾರವು ಈ ಕೆಳಕಂಡ ಅಧಿಕಾರಿ/ನೌಕರರುಗಳ ವಿರುದ್ಧ ಇರುವ ಜಂಟಿ ಇಲಾಖಾ ವಿಚಾರಣೆಯನ್ನು ಈ ಮೂಲಕ ಮುಕ್ತಾಯಗೊಳಿಸಿದೆ.

1) ಶ್ರೀ ಕೆ.ಎಸ್.ವೆಂಕಟೇಶಪ್ಪ, ಕೆಎಎಸ್ ಅಧಿಕಾರಿ, ಹಿಂದಿನ ಕ್ಷೇತ್ರಾಭಿವೃದ್ಧಿ ಅಧಿಕಾರಿ, ದೊಡ್ಡಬಳ್ಳಾಪುರ.
2) ಶ್ರೀ ಎ.ಆರ್ನೆಸ್ಟ್, ಹಿಂದಿನ ಕಿರಿಯ ಇಂಜಿನಿಯರ್, ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಕಛೇರಿ, ದೊಡ್ಡಬಳ್ಳಾಪುರ.
3) ಶ್ರೀ ಎ.ವಿಶ್ವನಾಥ್, ಹಿಂದಿನ ಕಿರಿಯ ಇಂಜಿನಿಯರ್, ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಕಛೇರಿ, ದೊಡ್ಡಬಳ್ಳಾಪುರ.
4) ಶ್ರೀ ರೆಹಮಾನ್, ಹಿಂದಿನ ಕಿರಿಯ ಇಂಜಿನಿಯರ್, ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಕಛೇರಿ, ದೊಡ್ಡಬಳ್ಳಾಪುರ.

ಶ್ರೀ ಕೆ.ಎಸ್.ವೆಂಕಟೇಶಪ್ಪ, ಕೆಎಎಸ್ ಅಧಿಕಾರಿ, ಶ್ರೀ ಎ.ಆರ್ನೆಸ್ಟ್, ಶ್ರೀ ಎ.ವಿಶ್ವನಾಥ್, ಶ್ರೀ ರೆಹಮಾನ್, ಕಿರಿಯ ಇಂಜಿನಿಯರ್‌ಗಳು ಅವರುಗಳು ಈ ಜಂಟಿ ಇಲಾಖಾ ವಿಚಾರಣೆ ನಡೆಯದಿದ್ದಲ್ಲಿ ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 32

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3).

**ಒಳಾಡಳಿತ ಸಚಿವಾಲಯ**

**ವಿಷಯ:** ಶ್ರೀ ವಿ.ಸುರೇಶ್, ಮಾಜಿ ಪಿಸಿ-404, 3ನೇ ಪಡೆ, ಕೆಎಸ್‌ಆರ್‌ಪಿ., ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ – ಆದೇಶ.

**ಉಲ್ಲೇಖ:**
1) ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 3ನೇ ಪಡೆ, ಕೆಎಸ್‌ಆರ್‌ಪಿ, ಬೆಂಗಳೂರು, ಇವರ ಆದೇಶ ಸಂಖ್ಯೆ:ಸಿಬ್ಬಂದಿ /4/ಡಿಇ–61/2002–03, ಓಬಿ ಸಂಖ್ಯೆ:52/2002–03, ದಿನಾಂಕ: 31–03–2003.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆಎಸ್‌ಆರ್‌ಪಿ, ಬೆಂಗಳೂರು ಇವರ ಆದೇಶ ಸಂಖ್ಯೆ:ಅಪೀಲು/2/2003–04, ದಿನಾಂಕ:12–09–2003.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 19–01–2004.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/2/36/2004, ದಿನಾಂಕ:10–07–2004, 09–08–2005, 09–09–2005 ಮತ್ತು 21–04–2006.

**ಪ್ರಸ್ತಾವನೆ:**

ಶ್ರೀ ವಿ.ಸುರೇಶ್, ಮಾಜಿ ಪಿಸಿ–404, 3ನೇ ಪಡೆ, ಕೆಎಸ್‌ಆರ್‌ಪಿ, ಬೆಂಗಳೂರು ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965ರ ನಿಯಮ 6ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ಕೆ.ಎಸ್.ಆರ್.ಪಿ, 3ನೇ ಪಡೆ, 'ಡಿ' ದಳದಲ್ಲಿ ಸೇವೆ ಸಲ್ಲಿಸುತ್ತಿರುವ ಶ್ರೀ ವಿ. ಸುರೇಶ್, ಪೇದೆ–404 ಆದ ನೀವು ಯಾವ ರಜೆಯನ್ನು ಪಡೆಯದೇ ಅಥವಾ ಮೇಲಾಧಿಕಾರಿ –ಗಳಿಂದ ಅನುಮತಿಯನ್ನು ಪಡೆಯದೇ ದಿನಾಂಕ:28–04–2002 ರಿಂದ 16–10–2002 ರವರೆಗೆ ಒಟ್ಟು 172 ಇದಸ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವುದಲ್ಲದೆ ನಿಮ್ಮ ಸೇವಾವಧಿಯಲ್ಲಿ ಆಗಿಂದಾಗ್ಗೆ ಕರ್ತವ್ಯಕ್ಕೆ ಗೈರುಹಾಜರಾಗಿ ಕರ್ತವ್ಯದಲ್ಲಿ ದುರ್ನಡತೆ ಮತ್ತು ನಿರ್ಲಕ್ಷ್ಯತೆಯನ್ನು ತೋರಿಸಿ ಕರ್ತವ್ಯಲೋಪವೆಸಗಿರುವುದು ನಿಮ್ಮ ಮೇಲಿನ ಆರೋಪವಾಗಿರುತ್ತದೆ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಕಮಾಂಡೆಂಟ್, 3ನೇ ಪಡೆ, ಕೆಎಸ್‌ಆರ್‌ಪಿ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:31–03–2003ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾ ಮಾಡಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕೆಎಸ್‌ಆರ್‌ಪಿ, ಬೆಂಗಳೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:12–09–2003ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಮೊದಲನೆಯದಾಗಿ ಅರ್ಜಿದಾರರು ಖಾಯಂ ಪೂರ್ವ ಅವಧಿಯಲ್ಲಿ ಕಡ್ಡಾಯಪಡಿಸಲಾದ ಮೂಲ ತರಬೇತಿಯನ್ನು ಸಹ ಪಡೆಯದೇ, ಅನಧಿಕೃತವಾಗಿ ಗೈರುಹಾಜರಾಗಿರುವುದು ಕಂಡುಬರುತ್ತದೆ. ಅರ್ಜಿದಾರರು ದಿನಾಂಕ:30–12–1999ರಲ್ಲಿ ಕರ್ತವ್ಯಕ್ಕೆ ಸೇರಿದ್ದು, 2002 ರವರೆಗೆ ಸುಮಾರು 327 ದಿನಗಳಿಗೂ ಹೆಚ್ಚು ಕಾಲ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಿ ಆಗಿರುವುದು ಕಂಡುಬರುತ್ತದೆ. ಇಲಾಖಾ ವಿಚಾರಣೆಯ ಸಮಯದಲ್ಲಿ ತಮ್ಮ ಅನಾರೋಗ್ಯದ ಬಗ್ಗೆ ಯಾವುದೇ ದಾಖಲೆಗಳನ್ನೂ ನೀಡದೆ, ಇಲಾಖಾ ವಿಚಾರಣೆ ಮುಕ್ತಾಯವಾದ ನಂತರ ವೈದ್ಯಕೀಯ ಚಿಕಿತ್ಸೆ ಪಡೆದ ಬಗ್ಗೆ ಜೆರಾಕ್ಸ್ ಪ್ರತಿ ಲಗತ್ತಿಸಿರುವುದು ಕಂಡುಬರುತ್ತದೆ. ಇತ್ತೀಚಿನ ದಿನಗಳಲ್ಲಿ ಹಲವಾರು ಸಂಪರ್ಕ ಮೂಲಗಳಿದ್ದರೂ, ಯಾವುದೇ ರೀತಿಯಲ್ಲಿ ತಮ್ಮ ಅನಾರೋಗ್ಯದ ಬಗ್ಗೆಯಾಗಲಿ ಅಥವಾ ಗೈರುಹಾಜರಿ ಬಗ್ಗೆಯಾಗಲಿ ಸಂಬಂಧಪಟ್ಟ ಕಚೇರಿಗೆ ತಿಳಿಸುವ ಪ್ರಯತ್ನ ಸಹ ಮಾಡಿರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯಕ್ಕೆ ಸೇರಿ, ಈ ರೀತಿ ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಇವರ ಉದ್ಧಟತನಕ್ಕೆ ಸಾಕ್ಷಿ ಆಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 27 ಪೊಸಿಅ 2004, ಬೆಂಗಳೂರು, ದಿನಾಂಕ: 29ನೇ ಡಿಸೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ವಿ.ಸುರೇಶ್, ಮಾಜಿ ಪಿಸಿ–404, 3ನೇ ಪಡೆ, ಕೆಎಸ್‌ಆರ್‌ಪಿ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:19–01–2004ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 73

ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಆರ್.ನಾಗೇಶ್, ಪಿಸಿ-368, ಹನೂರು ಪೋಲೀಸ್ ಠಾಣೆ, ಕೊಳ್ಳೇಗಾಲ ತಾಲ್ಲೂಕು, ಇವರ ಸಮಜಾಯಿಷಿ ಬಗ್ಗೆ.

**ಉಲ್ಲೇಖ:** 1) ಸರ್ಕಾರಿ ಆದೇಶ ಸಂಖ್ಯೆ:ಒಇ 217 ಪೊಸಿಅ 2004, ದಿನಾಂಕ:25-02-2006.
2) ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ: 3600/2006, ದಿನಾಂಕ:24-08-2006.
3) ಅರ್ಜಿದಾರರ ಸಮಜಾಯಿಷಿ ದಿನಾಂಕ:25-09-2006.

**ಪ್ರಸ್ತಾವನೆ:**

ಶ್ರೀ ಆರ್.ನಾಗೇಶ್, ಪಿಸಿ-368 ಇವರು ದಂತಚೋರ ಶ್ರೀ ವೀರಪ್ಪನ್‌ನನ್ನು ಹಿಡಿಯುವ ಖುಚಿಈ ತಂಡದಲ್ಲಿ ದಿನಾಂಕ:17-12-2000 ರಿಂದ 19-01-2003 ರವರೆಗೆ ಕರ್ತವ್ಯನಿರ್ವಹಿಸಿದ್ದು, ಈ ಅವಧಿಯಲ್ಲಿ ಅಲ್ಲಿ ಹತ್ತಿರದ ಅಲಂಬಾಡಿ ಗ್ರಾಮದಲ್ಲಿ ಅಲ್ಲಿನ ನಿವಾಸಿಯ ಮನೆಗೆ ತೆರಳಿ, ಅವಳನ್ನು ಲೈಂಗಿಕ ಕ್ರಿಯೆಗೆ ಆಹ್ವಾನಿಸಿ, ಅನುಚಿತವಾಗಿ ವರ್ತಿಸಿದ್ದು, ಈ ವಿಷಯವು ರಾಷ್ಟ್ರೀಯ ಮಾನವ ಹಕ್ಕು ಸಮಿತಿಗೆ ತಿಳಿದು, ಈ ಬಗ್ಗೆ ಯಾವ ಕ್ರಮ ಕೈಗೊಳ್ಳಲಾಗಿದೆ ಎಂದು ತಿಳಿಸುವಂತೆ ಕೋರಿದ್ದರ ಹಿನ್ನೆಲೆಯಲ್ಲಿ, ಇಲಾಖಾ ವಿಚಾರಣೆ ನಡೆಸಿ, ಆರೋಪ ಸಾಬೀತಾಗಿದ್ದ ಹಿನ್ನೆಲೆಯಲ್ಲಿ, ಶಿಸ್ತು ಪ್ರಾಧಿಕಾರಿಯವರು ಇವರ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಒಂದು ವರ್ಷ ತಡೆಹಿಡಿಯುವ ದಂಡನೆಯನ್ನು ದಿನಾಂಕ:18-05-2004ರ ಆದೇಶದಲ್ಲಿ ವಿಧಿಸಿರುತ್ತಾರೆ.

ಆರೋಪ ಗಂಭೀರ ಸ್ವರೂಪದ್ದಾಗಿರುವುದರಿಂದ ಹಾಗೂ ಆರೋಪಕ್ಕೆ ಅನುಗುಣವಾದ ಶಿಕ್ಷೆ ವಿಧಿಸಿಲ್ಲವೆಂದು, ಸರ್ಕಾರವು ಪರಿಗಣಿಸಿ, ಸುತ್ತೋಲೆ ಸಂಖ್ಯೆ:ಸಿಆಸುಇ 18 ಸೇಇವಿ 2001, ದಿನಾಂಕ:14-09-2001ರ ರೀತ್ಯಾ ''ಲೈಂಗಿಕ ಕಿರುಕುಳ'' ಆರೋಪಕ್ಕೆ, ಆರೋಪಿಯ ವೇತನವನ್ನು ಕೆಳಮಟ್ಟದ ಕಾಲವೇತನ ಶ್ರೇಣಿ ಅಥವಾ ಹುದ್ದೆಗೆ ಇಳಿಸುವ ಶಿಕ್ಷೆ ವಿಧಿಸಬಹುದಾಗಿ-ರುವ ಹಿನ್ನೆಲೆಯಲ್ಲಿ, ಸರ್ಕಾರದಲ್ಲಿ ಪರಿಶೀಲಿಸಿ, ಇವರ ವೇತನವನ್ನು ಪಿಸಿ ಹುದ್ದೆಯ ಕನಿಷ್ಟ ಮಟ್ಟಕ್ಕೆ ಐದು ವರ್ಷಗಳ ಅವಧಿಗೆ ಇಳಿಸಿ, ಈ ಅವಧಿಯಲ್ಲಿ ವಾರ್ಷಿಕ ವೇತನ ಬಡ್ತಿ ಗಳಿಸದೇ, ದಂಡನಾ ಅವಧಿಯ ನಂತರ ಕನಿಷ್ಟ ಮಟ್ಟದಿಂದ ವಾರ್ಷಿಕ ವೇತನ ಬಡ್ತಿ ಗಳಿಸುವ ದಂಡನೆಯನ್ನು ದಿನಾಂಕ:25-02-2006ರ ಆದೇಶದಲ್ಲಿ ವಿಧಿಸಲಾಗಿದೆ.

ಈ ಆದೇಶದ ವಿರುದ್ಧ ಅರ್ಜಿದಾರರು ಕೆಎಟಿಯಲ್ಲಿ ಸಂಖ್ಯೆ:3600/2006ರಲ್ಲಿ ಅರ್ಜಿ ದಾಖಲಿಸಿದ್ದು, ಮಾನ್ಯ ಆಡಳಿತ ನ್ಯಾಯ ಮಂಡಳಿಯು ದಿನಾಂಕ:24-08-2006ರ ತನ್ನ ಅಂತಿಮ ತೀರ್ಪಿನಲ್ಲಿ ನಿಯಮಾನುಸಾರ ಶಿಕ್ಷೆಯನ್ನು ಹೆಚ್ಚಿಸಬೇಕಾದಲ್ಲಿ ಅರ್ಜಿದಾರರಿಗೆ ಒಂದು ಅವಕಾಶ ನೀಡಿ, ಸಮಜಾಯಿಷಿ ಕೋರಬೇಕಾಗಿದ್ದು, ಸರ್ಕಾರ ಈ ನಿಯಮವನ್ನು ಪಾಲಿಸಿಲ್ಲವಾದ ಕಾರಣ, ಸರ್ಕಾರಿ ಆದೇಶ ದಿನಾಂಕ:25-02-2006 ಅನ್ನೇ ಅರ್ಜಿದಾರರಿಗೆ ನೀಡಿದ ಸಮಜಾಯಿಷಿ ಪತ್ರ (ಕಾರಣ ಕೇಳುವ ನೋಟೀಸೆಂದು)ವೆಂದು ಪರಿಗಣಿಸಿ, ಅರ್ಜಿದಾರರಿಂದ 4 ವಾರಗಳೊಳಗೆ ಸಮಜಾಯಿಷಿ /ಆಕ್ಷೇಪಣೆಗಳನ್ನು ಪಡೆದು, ಪರಿಶೀಲಿಸಿ, ಸೂಕ್ತ ಆದೇಶವನ್ನು ಮೂರು ತಿಂಗಳೊಳಗೆ ಹೊರಡಿಸುವಂತೆ ಆದೇಶಿಸಿದೆ.

ಅದರಂತೆ ಅರ್ಜಿದಾರರು ದಿನಾಂಕ:25-09-2006 ರಂದು ಸರ್ಕಾರಕ್ಕೆ ತಮ್ಮ ಸಮಜಾಯಿಷಿ/ಉತ್ತರ ನೀಡುತ್ತಾ, ತಮ್ಮ ವಿರುದ್ಧ ಸುಳ್ಳು ಆರೋಪ ಹೊರಿಸಿರುವರೆಂದೂ, ತಾವು ಯಾವುದೇ ತಪ್ಪು ಮಾಡಿಲ್ಲವೆಂದೂ, ಆದರೂ 18-05-2004ರ ಶಿಸ್ತು ಆದೇಶ ಸರಿಯಿದ್ದರೂ, ಶ್ರೀಮತಿ ಲಕ್ಷ್ಮಿ ಇವರು NHRC ಗೆ ದೂರು ನೀಡಿರುವ ಕಾರಣ, ಶಿಕ್ಷೆಯನ್ನು ಹೆಚ್ಚಿಸಿರುವುದು ಸಮಂಜಸವಾಗಿಲ್ಲವೆಂದು ತಿಳಿಸಿ, ಹೆಚ್ಚುವರಿಯಾಗಿ ವಿಧಿಸಿರುವ ಶಿಕ್ಷೆಯನ್ನು ರದ್ದುಪಡಿಸಿ, ಶಿಸ್ತು ಪ್ರಾಧಿಕಾರಿ ವಿಧಿಸಿರುವ ದಂಡನೆಯನ್ನೇ ಸ್ಥಿರೀಕರಿಸುವಂತೆ ಕೋರಿರುತ್ತಾರೆ.

ಅರ್ಜಿದಾರರು ಶಿಸ್ತು ಪ್ರಾಧಿಕಾರಿ ವಿಧಿಸಿರುವ ದಂಡನೆಯನ್ನು ಒಪ್ಪಿಕೊಂಡಿರುವರೆಂದರೇ, ಅವರು ತಪ್ಪು ಮಾಡಿರುವರೆಂದು ಸಾಬೀತಾಗುತ್ತದೆ. ಇಲಾಖಾ ವಿಚಾರಣೆಯಲ್ಲಿ ಆರೋಪ ಸಾಬೀತಾಗಿದೆ. ಅವರು ತಮ್ಮ ಮೇಲಿನ ಆರೋಪವನ್ನು ಅಲ್ಲಗೆಳೆಯಲು ಯಾವುದೇ ಅಂಶವನ್ನು ತಮ್ಮ ಮನವಿಯಲ್ಲಿ ಸಲ್ಲಿಸಿರುವುದಿಲ್ಲ.

ಶ್ರೀಮತಿ ಲಕ್ಷ್ಮಿ ಎನ್ನುವವಳನ್ನು ಲೈಂಗಿಕ ಕ್ರಿಯೆಗೆ ಆಹ್ವಾನಿಸಿದ್ದು, ಆಕೆ ಒಪ್ಪದಿದ್ದ ಕಾರಣ, ಕುಡಿದು ಬಂದು ಮದುವೆ ಸಂದರ್ಭದಲ್ಲಿ ಲಕ್ಷ್ಮಿಯ ಸಹೋದರರನ್ನು ಬಂಧಿಸಿಟ್ಟಿದ್ದು, ಅವನನ್ನು ಬಿಡುಗಡೆ ಮಾಡುವಂತೆ ಕೋರಲು ಹೋದ ಲಕ್ಷ್ಮಿಗೆ ''ಆವತ್ತು ಮನೆಯ ಬಳಿ ಬಂದಾಗ ನೀನು ಬರಲಿಲ್ಲ, ಈವತ್ತು ನಿನ್ನ ಸಹೋದರನನ್ನು ಬಿಡು ಎಂದು ಕೇಳ್ತಿಯಾ, ಎಂದು ಹೀಯಾಳಿಸಿ, ನೂರು ರೂಪಾಯಿ ಕೊಡ್ತೀನಿ, ಬೆಳಗಾಗುವುದರಲ್ಲಿ ನಿನ್ನ ಕೈಯಲ್ಲಿ ಎರಡು ಮಕ್ಕಳನ್ನು ಕೊಡುತ್ತೇನೆ ಬಾ'' ಎಂದು ಎಲ್ಲರ ಎದುರಿನಲ್ಲಿ ಅಧಿಕಾರ ದುರುಪಯೋಗಪಡಿಸಿಕೊಂಡು, ದೌರ್ಜನ್ಯದಿಂದ ವರ್ತಿಸಿ, ಇಲಾಖೆಯ ಘನತೆಗೆ ಕೆಟ್ಟ ಹೆಸರು ಬರುವ ರೀತಿಯಲ್ಲಿ ವರ್ತಿಸಿರುತ್ತಾರೆ.

ಈ ಆರೋಪವನ್ನು ಅರ್ಜಿದಾರರು ಅಲ್ಲಗಳೆದಿಲ್ಲ ಹಾಗೂ ಶಿಸ್ತು ಪ್ರಾಧಿಕಾರಿಯ ದಂಡನೆಯನ್ನು ಸಮರ್ಥಿಸಿರುತ್ತಾರೆ. ಅರ್ಜಿದಾರರು ಒಬ್ಬ ಜವಾಬ್ದಾರಿಯುತ ಪೊಲೀಸ್ ಅಧಿಕಾರಿಯಾಗಿದ್ದು, ರಕ್ಷಣೆ ನೀಡಿ, ಜನರನ್ನು ಕಾಪಾಡಬೇಕಾದ ಅವರೇ ಮನೆಗೆ ನುಗ್ಗಿ ಎಲ್ಲರ ಎದುರಿಗೆ ಒಬ್ಬ ಮಹಿಳೆಯನ್ನು ತನ್ನೊಡನೆ ಆಹ್ವಾನಿಸಿದ್ದುದನ್ನು ಗಮನಿಸಿದಾಗ, ಅರ್ಜಿದಾರರು ಒಬ್ಬ ಕಾಮುಕನೆನಿಸುತ್ತಾರೆ. ಬೇಕೆಂದೇ ಆ ಮಹಿಳೆಯ ಸಹೋದರನನ್ನು ಬಂಧನದಲ್ಲಿಟ್ಟು, ಬಿಡಿಸಿಕೊಂಡು ಬರಲು ಆ ಮಹಿಳೆ ಹೋದಾಗ, ಎಲ್ಲರ ಎದುರಿನಲ್ಲಿ ನನ್ನೊಡನೆ ಬಾ, ನಿನಗೆ ಎರಡು ಮಕ್ಕಳನ್ನು ಕೊಡುತ್ತೇನೆ ಎಂದು ಅವಾಚ್ಯ ಶಬ್ದಗಳನ್ನು ಪ್ರಯೋಗಿಸಿದ್ದು, ಮಹಿಳೆಯರ ಮೇಲಿನ ದೌರ್ಜನ್ಯಕ್ಕೆ ಸಾಕ್ಷಿಯಾಗಿದೆ.

ಈ ಹಿನ್ನೆಲೆಯಲ್ಲಿ, ಹಾಗೂ ಅರ್ಜಿದಾರರು ಈ ಅಂಶದ ಬಗ್ಗೆ ಯಾವುದೇ ಸಮರ್ಥನೀಯ ಕಾರಣಗಳನ್ನು ನೀಡದಿರುವ ಕಾರಣ, ದಿನಾಂಕ:25-02-2006ರ ಸರ್ಕಾರಿ ಆದೇಶದಲ್ಲಿನ ದಂಡನೆಯನ್ನು ರದ್ದುಪಡಿಸುವ ಅಗತ್ಯತೆ ಕಂಡುಬರುತ್ತಿಲ್ಲವೆಂದು ಪರಿಗಣಿಸಿ, ಸರ್ಕಾರವು ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 280 ಪೊಸಿಅ 2006 ಬೆಂಗಳೂರು, ದಿನಾಂಕ: 3ನೇ ಜನವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಆರ್.ನಾಗೇಶ್, ಪೊಲೀಸ್ ಪೇದೆ 368 ಹನೂರು ಪೊಲೀಸ್ ಠಾಣೆ, ಕೊಳ್ಳೇಗಾಲ ತಾಲ್ಲೂಕು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:25-09-2006ರ ಸಮಜಾಯಿಷಿಯನ್ನು ಸರ್ಕಾರವು ತಿರಸ್ಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 74

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ಸಿದ್ದರಾಜು, ಹೆಚ್‌ಸಿ-84, ಶ್ರೀರಂಗಪಟ್ಟಣ ಪೊಲೀಸ್ ಠಾಣೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿಯ ಬಗ್ಗೆ - ಆದೇಶ.

**ಉಲ್ಲೇಖ:**
1) ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ/2/ಸಿಆರ್-10/2005-06, ಓಬಿ ಸಂಖ್ಯೆ:213/2005-06, ದಿನಾಂಕ:27-07-2005.
2) ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ:ಅಪೀಲು/36/2005-06, ದಿನಾಂಕ:04-03-2006.
3) ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 24-04-2006.
4) ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/ 2/62/2006-07, ದಿನಾಂಕ:14-07-2006.
5) ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ: PSC/128/CNS/06, ದಿನಾಂಕ:05-12-2006.

**ಪ್ರಸ್ತಾವನೆ:**

ಶ್ರೀ ಸಿದ್ದರಾಜು, ಹೆಚ್‌ಸಿ-84, ಶ್ರೀರಂಗಪಟ್ಟಣ ಪೊಲೀಸ್ ಠಾಣೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 7ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

**1. ದೋಷರೋಪಣೆ:**

"ನೀವು ಸಿಹೆಚ್‌ಸಿ-84 ಆಗಿ ಈ ಹಿಂದೆ ಶ್ರೀರಂಗಪಟ್ಟಣ ಠಾಣೆಯಲ್ಲಿ ಠಾಣಾ ಬರಹಗಾರರಾಗಿ ಕರ್ತವ್ಯನಿರ್ವಹಿಸುತ್ತಿರುತ್ತೀರಿ. ದಿನಾಂಕ:05-03-2005ರಂದು ಸಂಜೆ 6-00 ಗಂಟೆಯಲ್ಲಿ ಜಿಲ್ಲಾ ಪೊಲೀಸ್ ಸೂಪರಿಂಟೆಂಡೆಂಟ್, ಮಂಡ್ಯ ಜಿಲ್ಲೆ, ಮಂಡ್ಯ ಇವರು ಸಿಪಿಐ ಕಚೇರಿಗೆ ಭೇಟಿ ನೀಡಿದಾಗ, ನೀವು ಕಚೇರಿಯಲ್ಲಿರದೆ, ನಿಮ್ಮ ಇರುವಿಕೆಯ ಬಗ್ಗೆ ಕಚೇರಿಯಲ್ಲಿ ಯಾವುದೇ ಮಾಹಿತಿ ನೀಡದೆ ಗೈರುಹಾಜರಾಗಿರುತ್ತೀರಿ. ಹಾಗೂ ನೀವು ಮೇಲಾಧಿಕಾರಿಗಳ ವೃತ್ತ ವ್ಯಾಪ್ತಿಯಲ್ಲಿ ಅಪರಾಧದ ಅಂಕಿಅಂಶಗಳ ಮಾಹಿತಿಯನ್ನು ತಕ್ಷಣದ ಅವಗಾಹನೆಗಾಗಿ ಸಿಗದೆ ಇರುವಂತೆ ಮಾಹಿತಿ ಇಟ್ಟಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:27-07-2005ರ ಆದೇಶದಲ್ಲಿ ಅರ್ಜಿದಾರರ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ದಕ್ಷಿಣ ವಲಯ, ಮೈಸೂರು ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:04-03-2006ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷಾರೋಪಣಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಮುಖ್ಯ ಪೇದೆ ಆಗಿದ್ದರೂ ಸಹ ಮೂರು ವರ್ಷಗಳಿಂದ ವೃತ್ತ ಪೊಲೀಸ್ ಇನ್ಸ್‌ಪೆಕ್ಟರ್ ರವರ ಕಚೇರಿಯಲ್ಲಿ ಯಾವುದೇ ಭತ್ಯೆ ಪಡೆಯದೇ ಬರಹಗಾರನಾಗಿ ಕರ್ತವ್ಯನಿರ್ವಹಿಸುತ್ತಿದ್ದು, ದಿನಾಂಕ:04-03-2005 ರಿಂದಲೇ ತನಗೆ ಹುಷಾರಿಲ್ಲದಿದ್ದರೂ, ದಿನಾಂಕ: 05-03-2005ರಂದು ಫೆಬ್ರವರಿ 2005ರ ತಿಂಗಳ ವೃತ್ತ ವ್ಯಾಪ್ತಿಯ ಅಪರಾಧ ಪ್ರಕರಣ ಅಂಕಿ ಅಂಶಗಳ ತ:ಖ್ತೆ ತಯಾರಿಸಿ, ಮಧ್ಯಾಹ್ನ 3-30ರ ಸಮಯದಲ್ಲಿ ಸದರಿ ತ:ಖ್ತೆಯನ್ನು ಜಿಲ್ಲಾ ಪೊಲೀಸ್ ಕಚೇರಿಗೆ ಸಿಪಿಸಿ-534 ರವರಿಗೆ ಕೊಟ್ಟು ಬರಲು ಕಳುಹಿಸಿದ್ದು, ಮಧ್ಯಾಹ್ನ 3-30ಕ್ಕೆ ಊಟಕ್ಕೆ ಹೊರಟಾಗ, ಬೆಳಗಿನಿಂದ ಕೆಲಸದ ಒತ್ತಡದಿಂದ ಹೆಚ್ಚಾದ ಅನಾರೋಗ್ಯ ಉಲ್ಬಣಗೊಂಡು, ವೈದ್ಯರ ಬಳಿ ಹೋಗಿ ಚಿಕಿತ್ಸೆ ಪಡೆದು, ವೈದ್ಯರ ಸಲಹೆ ಮೇರೆಗೆ ವಿಶ್ರಾಂತಿ ಪಡೆದಿರುತ್ತಾರೆ. ಈ ಮಧ್ಯೆ ಪೊಲೀಸ್ ಅಧೀಕ್ಷಕರು, ರವರು ಸಿಪಿಐ ಕಚೇರಿಗೆ ಭೇಟಿ ನೀಡಿರುತ್ತಾರೆ. ಅರ್ಜಿದಾರರು 1980ರಲ್ಲಿ ಕರ್ತವ್ಯಕ್ಕೆ ಸೇರಿದ್ದು, ಯಾವುದೇ ಗುರುತರ ಆರೋಪ ಎಸಗಿದಂತೆ ಕಂಡುಬರುತ್ತಿಲ್ಲ.

ಅರ್ಜಿದಾರರು ವೈದ್ಯರ ಸಲಹೆ ಮೇರೆಗೆ ವಿಶ್ರಾಂತಿ ಪಡೆಯಲು ಕಚೇರಿ ಬಿಟ್ಟು ತೆರಳಿದ್ದು, ಅವರ ಅನಾರೋಗ್ಯ ಕಾರಣದಿಂದ ವೈದ್ಯರ ಬಳಿ ಚಿಕಿತ್ಸೆ ಪಡೆದಿರುವುದಕ್ಕೆ ವೈದ್ಯರು ನೀಡಿರುವ 'ಔಷದ ಚೀಟಿಯನ್ನೂ' ಸಹ (Prescription)

ಸಲ್ಲಿಸಿರುವ ಹಿನ್ನೆಲೆಯಲ್ಲಿ ಶಿಸ್ತು ಪ್ರಾಧಿಕಾರಿಯು ಅಮಾನತ್ತೆಂದು ಪರಿಗಣಿಸಿರುವ ಅವಧಿಯನ್ನು (ದಿನಾಂಕ:07–03–2005 ರಿಂದ 22–05–2005) ಕರ್ತವ್ಯದ ಮೇಲಿನ ಅವಧಿ ಎಂದು ಪರಿಗಣಿಸಿ, ಇನ್ನು ಮುಂದೆ ಯಾವುದೇ ಸೂಚನೆ ಇಲ್ಲದೆ/ಪೂರ್ವಾನುಮತಿ ಇಲ್ಲದೆ ಕಚೇರಿಗೆ ಗೈರು ಹಾಜರಿ ಆಗಬಾರದೆಂದು 'ಎಚ್ಚರಿಕೆ' ನೀಡಲು ಸರ್ಕಾರ ಉದ್ದೇಶಿಸಿ, ಕರ್ನಾಟಕ ಲೋಕ ಸೇವಾ ಆಯೋಗದ ಅನುಮೋದನೆ ಕೋರಿದ್ದು, ಕರ್ನಾಟಕ ಲೋಕ ಸೇವಾ ಆಯೋಗವು ದಿನಾಂಕ:05–12–2006ರ ಪತ್ರದಲ್ಲಿ ಸರ್ಕಾರದ ಪ್ರಸ್ತಾವನೆಗೆ ಸಹಮತಿ ನೀಡಿದೆ. ಅದರಂತೆ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 300 ಪೊಸಿಅ 2006 ಬೆಂಗಳೂರು, ದಿನಾಂಕ: 4ನೇ ಜನವರಿ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ದಿನಾಂಕ:27–07–2005ರ ಶಿಸ್ತು ಪ್ರಾಧಿಕಾರಿ ಆದೇಶವನ್ನು ರದ್ದುಪಡಿಸಿ, ಶ್ರೀ ಸಿದ್ದರಾಜು, ಹೆಚ್‌ಸಿ–84, ಶ್ರೀರಂಗಪಟ್ಟಣ ಪೊಲೀಸ್ ಠಾಣೆ, ಮಂಡ್ಯ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:24–04–2006ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಪುರಸ್ಕರಿಸಿ, ದಿನಾಂಕ:07–03–2005 ರಿಂದ 22–05–2005 ರವರೆಗಿನ ಅಮಾನತ್ತಿನ ಅವಧಿಯನ್ನು "ಕರ್ತವ್ಯದ ಮೇಲಿನ ಅವಧಿ" ಎಂದು ಪರಿಗಣಿಸಿದೆ.

ಇನ್ನು ಮುಂದೆ ಯಾವುದೇ ಮುನ್ಸೂಚನೆ ಇಲ್ಲದೇ/ಪೂರ್ವಾನುಮತಿ ಇಲ್ಲದೇ, ಕಚೇರಿಗೆ ಗೈರುಹಾಜರಿ ಆಗಬಾರದೆಂದು 'ಎಚ್ಚರಿಕೆ' ನೀಡಿದೆ.

ಈ ಆದೇಶವನ್ನು ಕರ್ನಾಟಕ ಲೋಕ ಸೇವಾ ಆಯೋಗದ ದಿನಾಂಕ:05–12–2006ರ ಪತ್ರದಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ.ಕುಲಕರ್ಣಿ**

ಪಿ.ಆರ್. 75

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

## EDUCATION SECRETARIAT

**Subject:** Extension of AICTE scales of pay to the lecturers of Government and Aided polytechnics in non-engineering programme like CDDM, Commercial Practice and Library Science, etc., – reg.

**Read:**
1) Government Order No.ED 79 DTE 91 dated: 18-7-94.
2) Government Order No.ED 15 DTE 2000 dt: 28-7-2000.
3) Government Order No.ED 479 TPE 97 dt: 19-4-2001 and 11-10-2001.
4) Government Order No.ED 111 DTE 2000 dt:19-7-2001.
5) Government Order No.ED 25 DTE 2002 dt:29-11-2002.
6) Government Order No.ED 123 TPE 2003 dt: 5-1-2004.
7) Memorandum dated: 11-5-2003 of the Karnataka Polytechnic Diploma Teachers' Association (R), Bangalore.
8) Letter No.DTE 14 EST(1) 2003/2638 dated: 4-9-2003, 20-10-2003 and 7-7-2004 from the Director of Technical Education, Bangalore.

**PREAMBLE:**

1. In the Government Order read at (1) above, Government has extended revised AICTE pay scales to the teachers of Government and grant-in-aid polytechnics in Engineering, Humanities and Science subjects with effect from 1-4-1993 subject to the terms and conditions specified therein.

2. As per the said Government Order, AICTE scale of pay has not applied to Lecturer, Head of Section and Principal, Senior Principal who are not covered by the subjects under the AICTE scheme as also the Lecturers, Assistant Lecturers who are on the State scales of pay i.e., Rs.1720-3170 and Rs.1400-2750 such as Printing, Lithography, Library Science, Lecturer Costume Design and Dress Making, etc., and scale of pay extended only to the lecturers of engineering subjects Humanities and Sciences covered under AICTE scheme with second class Bachelors Degree in the appropriate branch of engineering and lecturers of Humanities and Science with second class Master Degree in appropriate branch.

3. The G.O.I. has revised the pay scales of Central Government employees on the recommendations of the 5th Pay Commission including those who are on AICTE and UGC pay scales. Subsequently, the AICTE, New Delhi in its letter F.No.1-65/CD/NEC/98-99 dated: 30-12-99 has informed that they have formulated a scheme for revision of pay scales and service conditions of the teachers of diploma level technical institutions in the country. The recommendations of the AICTE were sent to G.O.I. for approval. The G.O.I. has examined these recommendations and suggested that the revised pay scales and service conditions may be circulated to all the State Government and Union Territory administrations for information and appropriate action. Accordingly AICTE has communicated their recommendations for appropriate action.

4. The All Karnataka Polytechnics Technical Teachers Association has been persistently demanding to revise the AICTE scales of pay to the teachers. They have requested that the State Government should implement the new AICTE pay scales with effect from 1-1-1996.

5. The State Government in its order No.ED 188 DCE 98 dated: 7-1-99 had constituted a committee to examine the extension of the revised UGC and AICTE pay scales to the teachers of Universities, degree colleges, engineering colleges and polytechnics and also of librarians and physical education directors. The committee has examined and recommended for extension of revised AICTE scales of pay, to those cadres, which were already on AICTE scales in Government and aided polytechnics in the State.

6. Matter has been examined by Government in the light of extension of AICTE pay scale to the teachers in the State vide Government Order read (1) above, revised AICTE recommendations in regard to diploma level technical institutions communicated vide letter No. F.No.1-65/CD/ NEC/98-99 dated: 30-12-99 of AICTE and the fact that the entire expenditure extension of revised AICTE scale of pay has to be borne by the State Government. The State Government in consultation with Finance Department has extended revised AICTE pay scales to the teachers of Government and Aided polytechnics in Engineering subjects and Humanities and Science subjects vide Government Order read (2) above, subject to the terms and conditions stipulated therein.

7. In the Government Order read at 3 above, sanction was accorded for extension of AICTE scales of pay to the Lecturers in Library Science of Government Polytechnics and Institute of Printing Technology coming under the control of Directorate of Technical Education with effect from 1-2-2001 subject to the terms and conditions stipulated therein. In the Government Order dated: 19-4-2001 read at (3) above it was specified that for the future recruitment the qualification prescribed to the post of lecturers is First class in Bachelor Degree in respective engineering subjects. But in respect of lecturers who were already working the qualification condition has been relaxed and the lecturers who possess the second class Bachelor Degree in respective Engineering subjects or second class Master Degree in Humanities and Science subjects have been extended AICTE scales of pay only with effect from dated: 1-4-93. The Director of Technical Education has reported the Chairman, Academy Information Science has represented to Government that only few lecturers are possessing second class with 55% marks and hence only few lecturers will get the benefits and hence requested to amend the education qualification as second class instead of second class with 55% marks. Considering the request, Government vide Government Order dated: 11-10-2001 read at (3) above, extended the AICTE scale of pay with effect from 1-2-2001 to lecturers in Library Science in Government and Aided polytechnics who possess a second class Master Degree in Library Science and who were working as lecturer in Library Science as on 1-4-93 on the analogy of procedure adopted in respect of lecturers in Engineering and Humanities and Science subjects.

8. In the Government Order read at (2) above, revised AICTE pay scales were extended retrospectively with effect from 1-4-99 and other benefits prospectively from the date of issue of that order. Further this was amended vide Government Order read at (4) above that the revised AICTE scales of pay will be effective from 1-4-98 instead of 1-4-99 to the Government and Aided polytechnic lecturers in Engineering subjects, Humanities and Science subjects and revised pay scales will be extended notionally from 1-4-98 and monetary benefits from 1-4-99. Further it was also ordered that the lecturers of polytechnics who were retired between 1-1-96 to 31-3-98 the pensionary benefits / family pension can be revised with effect from 1-4-98 as per Government Order No.FD(SPL) 2 PET 99 dated: 15-2-99.

9. In Government Order read at (5) above, 1986 AICTE scale of pay to the diploma holder lecturers in engineering subjects were extended to those who are appointed in Government and Aided polytechnics in technical subjects under 1986 AICTE scheme and who are in service on 1-4-93 with monetary benefit payable from prospective date subject to the terms and conditions stipulated therein.

10. The Karnataka Polytechnic Diploma Teachers' Association (R), Bangalore vide memorandum read at (7) above among other things has requested for extension of 1986 AICTE pay scale to lecturers in non-engineering subjects. The Director of Technical Education has also recommended vide his letter read at (8) above. Hence the Government has decided to extend the AICTE pay scales to lecturers of non-engineering subject.

**GOVERNMENT ORDER NO.ED 77 DTE 2003 (1), BANGALORE, DATED:22nd NOVEMBER 2006**

11. Government are pleased to extend the 1996 AICTE pay scales to the Teachers / Lecturers of Government / Aided Polytechnics in non-engineering subject to terms and conditions specified here under:

(1) This extension of AICTE pay scales will applicable to the Lecturers / Teachers in non-engineering subjects who were appointed before 1-4-93 (i.e., before extension of 1986 pay scale) with at least second class diploma in the concerned subject and four years experience in the concerned field.

(2) The exemption is not applicable to the Lecturers / Teachers who are appointed after 1-4-93.

12. This orders issued with the concurrence of Finance Department vide U.O.Note No.FD 100 Exp-8. dt:19-8-2006.

By Order and in the name of the Governor of Karnataka,

**M.P. MANJUNATH**

P.R. 138

Under Secretary to Government,
Education Department.

**Subject:** Grant of monetary benefits with effect from 1-4-93 to the diploma holder lecturers in Government and Aided polytechnics who have been extended AICTE pay scales from 1-4-93.

**Read:** 1) Government Order No.ED 79 DTE 91 dated: 18-7-94.
2) Government Order No.ED 479 TPE 97 dt: 11-10-2001.
3) Government Order No.ED 25 DTE 2002 dt:29-11-2002.

**Preamble:**

1. In the Government Order read at (1) above, 1986 AICTE pay scales were extended to the Graduate lecturers of polytechnics in the State with effect from 1-4-1993, monetary benefits were also allowed to them with effect from that date.

2. In the Government Order read at (2) above, the AICTE scales were extended to the lecturers in Library Science / Printing Technology with effect from 1-4-93 and monetary benefit from 1-2-2001.

3. In the Government Order read at (3) above, AICTE scales of pay were extended to the diploma holder lecturers in engineering subjects with effect from 1-4-93 and the monetary benefit from 29-11-2002 (i.e., from the date of issue of the order). The 1986 AICTE scales were extended to these categories of lecturers with retrospective effect from 1-4-93 (with monetary benefits from prospective dates). After the 1996 AICTE scales of pay had been extended to the Graduate lecturers in engineering subjects and Post-graduate lecturers in Science and Humanity. By virtue of extension of 1986 AICTE scales of pay to the lecturers in Library Science / Printing Technology / Diploma holder lecturers in engineering subjects with retrospective effect from 1-4-93 notionally, they also became entitle to the 1996 AICTE scales of pay with effect from 1-4-98 with monetary benefits from 1-1-99 as per Government Order No.ED 15 DTE 2000 dated: 28-7-2000.

4. The office bearers of the Polytechnic Diploma Teachers Association, Bangalore among other things has represented for grant of monetary benefits with effect from 1-4-93 to the diploma holder lecturers who have been extended the AICTE pay scales from 1-4-93. The Director of Technical Education has also recommended. Government throughly examined the request of the Association and decided to consider the request.

**GOVERNMENT ORDER NO.ED 77 DTE 2003 (2) BANGALORE, DATED:22nd NOVEMBER 2006**

5. For the reason stated in the preamble, sanction is accorded to extend the 1996 AICTE scales of pay to the lecturers in Library Science, Printing Technology and Diploma holder lecturers in engineering subjects of Government and Aided polytechnics with effect from 1-4-98 with monetary benefits payable from 1-1-99.

6. This orders issued with the concurrence of Finance Department vide U.O.Note No.FD 41 Ser-2/2004 dt:21-6-2004.

By Order and in the name of the Governor of Karnataka,

**M.P. MANJUNATH**

P.R. 139

Under Secretary to Government,
Education Department.

**Subject:** Extension of AICTE scales of pay to all the Lecturers in the School of Mines, K.G.F..

**Read:** 1) Government Order No.ED 25 DTE 2002 dt:29-11-2002.
2) Memorandum dated: 11-5-2003 of the Karnataka Polytechnic Diploma Teachers' Association (R), Bangalore.
3) Letter No.DTE 14 EST(1) 2003/2638 dated: 4-9-2003 from the Director of Technical Education, Bangalore 20-10-2003 and 7-7-2004.

**Preamble:**

1. In the Government Order read at (1) above, 1986 AICTE scales of pay to the diploma holder lecturers in engineering subjects were extended to those who are appointed in Government and Aided polytechnics in Technical subjects under 1986 AICTE scheme and who are in service on 1-4-93 with monetary benefit payable from prospective date and subject to the terms and conditions stipulated therein. The Lecturers in School of Mines, K.G.F. possess either Master degree in Science or Bachelor degree or diploma in engineering subjects and this institution and the courses offered by it are already covered under the AICTE scheme. However, these lecturers were not earlier extended the 1986 AICTE pay scale (even with Graduate qualification in engineering subjects). The School of Mines, K.G.F. is under the control of Directorate of Technical Education and the institution and all the courses offered by it are approved by the AICTE.

2. The Karnataka Polytechnic Diploma Teachers Association (R), Bangalore vide Memorandum read at (2) above has requested for extension of 1986 pay scales to the lecturers in the School of Mines, K.G.F. The Director of Technical Education has also recommended vide its letter read at (3) above. Government throughly examined the Memorandum of the Association and decided to extend the AICTE pay scales to the lecturers in the School of Mines, K.G.F. Hence the following order.

**GOVERNMENT ORDER NO.ED 77 DTE 2003 (3) BANGALORE, DATED:22nd NOVEMBER 2006**

3. Sanction is accorded for extension of AICTE scales of pay to the lecturers in the School of Mines, K.G.F. with effect from 1-4-1993 subject to the same terms and conditions which are stipulated in Government Order No.ED 25 DTE 2002 dated: 29-11-2002 and subject to modification of monetary benefit from 1-1-99.

4. This orders issued with the concurrence of Finance Department vide U.O.Note No.FD 41 Ser-2/2004 dt:21-6-2004.

By Order and in the name of the Governor of Karnataka,
**M.P. MANJUNATH**
Under Secretary to Government,
Education Department.

P.R. 137

**ಸಮಾಜ ಕಲ್ಯಾಣ ಸಚಿವಾಲಯ**

**ವಿಷಯ:** ಶ್ರಮಶಕ್ತಿ ಯೋಜನೆಯನ್ನು ಡಿ.ದೇವರಾಜ್ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮಕ್ಕೆ ಸಂಪೂರ್ಣವಾಗಿ ವಹಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಸಕಇ 245 ಬಿಎಂಎಸ್ 2004, ದಿನಾಂಕ: 09.03.2005.
2) ಸರ್ಕಾರದ ಆದೇಶ ಸಂಖ್ಯೆ: ಸಕಇ 245 ಬಿಎಂಎಸ್ 2004, ದಿನಾಂಕ: 27.04.2005.
3) ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ನಿಯಮಿತ ಇವರ ಪತ್ರ ಸಂಖ್ಯೆ: ಕಅಅಸಿ/68/2006–07/3787 ದಿನಾಂಕ: 22.09.2006.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರಮಶಕ್ತಿ ಯೋಜನೆಯನ್ನು ಸಾಂಪ್ರದಾಯಕ ಕುಶಲಕರ್ಮಿಗಳು ಮತ್ತು ವೃತ್ತಿ ಕುಲಕಸುಬುದಾರರಿಗೆ ಆರ್ಥಿಕ ನೆರವು ಒದಗಿಸುವ ಸಲುವಾಗಿ ಹೊರಡಿಸಲಾಗಿತ್ತು. ಮೇಲಿನ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸದರಿ ಯೋಜನೆಯನ್ನು ಅನುಷ್ಠಾನಗೊಳಿಸುವ ಸಲುವಾಗಿ ಮಾರ್ಗಸೂಚಿಗಳನ್ನು ಹೊರಡಿಸಲಾಗಿತ್ತು. ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ನಿಯಮಿತವು ಅಗತ್ಯ ಹಣವನ್ನು ಒದಗಿಸುವುದು ಹಾಗೂ ಲೆಕ್ಕ ಮತ್ತು ಇತರೆ ಸಂಬಂಧಪಟ್ಟ ಕ್ರಮಗಳನ್ನು ಕೈಗೊಳ್ಳುವುದು ಮತ್ತು ಹಿಂದುಳಿದ ಮತ್ತು ಅಲ್ಪಸಂಖ್ಯಾತರ ಇಲಾಖೆಯ ಜಿಲ್ಲಾಧಿಕಾರಿಗಳು ಈ ಯೋಜನೆಯನ್ನು ಅನುಷ್ಠಾನಗೊಳಿಸುವುದೆಂದು ತೀರ್ಮಾನಿಸಲಾಗಿತ್ತು. ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ಇವರು ದಿನಾಂಕ: 29.06.2006 ರಂದು ಪ್ರಸ್ತಾವನೆಯನ್ನು ಸಲ್ಲಿಸಿ, ಯೋಜನೆಯನ್ನು ಅನುಷ್ಠಾನ ಮಾಡುವುದರಲ್ಲಿ ಹಲವಾರು ಕಾರಣಗಳಿಂದ ವಿಳಂಬಿತವಾಗಿದೆ ಎಂದು ತಿಳಿಸಿ ಹಾಗೂ ಲೆಕ್ಕಪರಿಶೋಧಕರು ಆಪಾದನೆ ವ್ಯಕ್ತಪಡಿಸಿರುತ್ತಾರೆಂದು ತಿಳಿಸಿ, ಡಿ.ದೇವರಾಜ್ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ

ನಿಗಮಕ್ಕೆ ನೀಡಿರುವ ಆದೇಶದಂತೆ ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮಕ್ಕೆ ಈ ಯೋಜನೆಯನ್ನು ಅನುಷ್ಠಾನಗೊಳಿಸುವ ಜವಾಬ್ದಾರಿಯನ್ನು ನೀಡಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಕಇ 245 ಬಿಎಂಎಸ್ 2004, ಬೆಂಗಳೂರು, ದಿನಾಂಕ: 30ನೇ ನವೆಂಬರ್ 2006**

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದೆ. ಪ್ರಸ್ತಾವನೆಯಲ್ಲಿ ಹೇಳಿದ ಕಾರಣಗಳಿಂದಾಗಿ ಶ್ರಮಶಕ್ತಿ ಯೋಜನೆಯನ್ನು ಪೂರ್ಣವಾಗಿ ಅನುಷ್ಠಾನಗೊಳಿಸಲು ಈ ಕೆಳಕಂಡ ಷರತ್ತುಗಳನ್ವಯ ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಸಂಪೂರ್ಣ ಜವಾಬ್ದಾರಿಯನ್ನು ವಹಿಸಿ ಆದೇಶಿಸಿದೆ.

**ಷರತ್ತುಗಳು:**

1) ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿಗಳ ಬದಲು ಜಿಲ್ಲಾ ವ್ಯವಸ್ಥಾಪಕರು ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ನಿಯಮಿತ ಇವರು ಈ ಯೋಜನೆಯ ಅನುಷ್ಠಾನಾಧಿಕಾರಿ ಆಗಿರುತ್ತಾರೆ.

2) ಜಿಲ್ಲಾ ವ್ಯವಸ್ಥಾಪಕರು, ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ನಿಯಮಿತ ಇವರು ಜಿಲ್ಲಾ ಸಮಿತಿಯ ಸದಸ್ಯ ಕಾರ್ಯದರ್ಶಿಯಾಗಿ ಕಾರ್ಯನಿರ್ವಹಿಸುತ್ತಾರೆ.

3) ಸರ್ಕಾರಿ ಆದೇಶದಲ್ಲಿ ತಿಳಿಸಿರುವ ತಾಲ್ಲೂಕು ಸಮಿತಿಯನ್ನು ರದ್ದುಪಡಿಸಿದೆ. ಈ ಸಮಿತಿಯು ಶ್ರಮಶಕ್ತಿ ಯೋಜನೆಯ ಅನುಷ್ಠಾನದಲ್ಲಿ ನಿರ್ವಹಿಸುತ್ತಿದ್ದ ಎಲ್ಲಾ ಕಾರ್ಯಗಳನ್ನು ಜಿಲ್ಲಾ ಸಮಿತಿಯೇ ನಿರ್ವಹಿಸುವುದು ಹಾಗೂ ಯೋಜನೆಯ ಪೂರ್ಣ ಅನುಷ್ಠಾನ, ದಸ್ತಾವೇಜು ಪಡೆಯುವಿಕೆ, ಮರುಪಾವತಿ ಪಡೆಯುವಿಕೆ, ಸಾಲ ವಸೂಲಾತಿ, ಲೆಕ್ಕಪತ್ರ ನಿರ್ವಹಣೆ ಇತ್ಯಾದಿ ಎಲ್ಲಾ ಕಾರ್ಯಗಳನ್ನು ಜಿಲ್ಲಾ ಸಮಿತಿ ನಿರ್ವಹಿಸುವುದು ಮತ್ತು ಜಿಲ್ಲಾ ಸಮಿತಿಯ ನಿರ್ದೇಶನಗಳನ್ನು ಜಾರಿಗೆ ತರುವ ಪೂರ್ಣ ಜವಾಬ್ದಾರಿ ಸದಸ್ಯ ಕಾರ್ಯದರ್ಶಿಯವರದ್ದಾಗಿರುತ್ತದೆ.

ಮೇಲೆ ಓದಲಾದ (1) ಮತ್ತು (2) ರಲ್ಲಿ ಓದಲಾದ ಸರ್ಕಾರದ ಆದೇಶಗಳಲ್ಲಿ ಸೂಚಿಸಿದ ಷರತ್ತುಗಳು, ಅನುಷ್ಠಾನ ರೀತಿ ಮಾರ್ಗಸೂಚಿಗಳನ್ವಯ ಈ ಯೋಜನೆಯನ್ನು ಅನುಷ್ಠಾನಗೊಳಿಸತಕ್ಕದ್ದು ಹಾಗೂ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಅಧಿಕಾರಿಗಳು 2005-06ನೇ ಸಾಲಿನಿಂದ ಈವರೆಗೆ ನಿರ್ವಹಿಸಲಾಗುತ್ತಿದ್ದ ಶ್ರಮಶಕ್ತಿ ಯೋಜನೆಯ ವ್ಯವಹಾರಕ್ಕೆ ಸಂಬಂಧಪಟ್ಟ ಪೂರ್ಣ ಸಾಮಗ್ರಿ, ಮಾಹಿತಿಗಳು ಮತ್ತು ಬಾಕಿ ಉಳಿದಿರುವ ಹಣದೊಂದಿಗೆ ಖಾತೆಯನ್ನು ಆಯಾ ಜಿಲ್ಲೆಯ ಜಿಲ್ಲಾ ವ್ಯವಸ್ಥಾಪಕರು ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ನಿಯಮಿತ ಇವರಿಗೆ ವಹಿಸಿಕೊಡುವುದು.

ಆಗಿಂದಾಗ್ಗೆ ಸಂದರ್ಭಾನುಸಾರ ಅಗತ್ಯತೆಯನ್ನು ಗುರುತಿಸಿ, ಶ್ರಮಶಕ್ತಿ ಯೋಜನೆಯ ಅನುಷ್ಠಾನಕ್ಕಾಗಿ, ಮಾರ್ಗಸೂಚಿಗಳನ್ನು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮ ನಿಯಮಿತ, ಇವರ ನಿರ್ದೇಶಕ ಮಂಡಳಿಯ ಅನುಮೋದನೆಯೊಂದಿಗೆ ಹೊರಡಿಸಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಂ. ಬಾಟೆ**

ಪಿ.ಆರ್. 18

ಸರ್ಕಾರದ ಅಧೀನ ಕಾರ್ಯದರ್ಶಿ-3,

ಸಮಾಜ ಕಲ್ಯಾಣ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

## ತಿದ್ದುಪಡಿ

**ಸಂಖ್ಯೆ: ಆಕುಕ 05 ಪಿಟಿಡಿ 2004, ಬೆಂಗಳೂರು, ದಿನಾಂಕ: 20ನೇ ಡಿಸೆಂಬರ್ 2006**

**ವಿಷಯ:** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯಲ್ಲಿ ಮಾನಸಿಕ ಆರೋಗ್ಯ ಕ್ರಿಯಾ ಯೋಜನೆಗಳ ಅನುಷ್ಠಾನಕ್ಕೆ ಹುದ್ದೆಗಳ ಸೃಜಿಸುವ ಕುರಿತು ಆದೇಶ.

ಸರ್ಕಾರಿ ಆದೇಶ ಸಂಖ್ಯೆ: ಆಕುಕ 05 ಏಎಂಇ 2004, ದಿನಾಂಕ: 15.06.2006ರ ಆದೇಶ ಭಾಗದ 5ನೇ ಸಾಲಿನಲ್ಲಿ 23 ಸೈಕಿಯಾಟ್ರಿಕ್ ಸೋಷಿಯಲ್ ವರ್ಕರ್ಸ್ ಹುದ್ದೆಯ "ವೇತನ ಶ್ರೇಣಿ ರೂ.4150-7800" ಎಂಬುದರ ಬದಲಾಗಿ "ವೇತನ ಶ್ರೇಣಿ ರೂ.6000-11200" ಎಂಬುದಾಗಿ ಹಾಗೂ ಇದಕ್ಕೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ: 2210-01-110-1-22 (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದೆಂದು ಕ್ರಮವಾಗಿ ತಿದ್ದಿ ಮತ್ತು ಸೇರಿಸಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಪಿ.ಆರ್. 19

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ವಿಷಯ:** ಆತ್ರೇಯ ಛಾರಿಟೇಬಲ್ ಟ್ರಸ್ಟ್, ಆತ್ರೇಯ ಇನ್ಸ್‌ಟ್ಯೂಟ್ ಆಫ್ ಆಯುರ್ವೇದಿಕ್ ವೈದ್ಯಕೀಯ ಕಾಲೇಜು ಮತ್ತು ಆಸ್ಪತ್ರೆ, ಬೆಂಗಳೂರು ಇವರಿಗೆ 2003-2004ನೇ ಶೈಕ್ಷಣಿಕ ಸಾಲಿನಿಂದ ಹೊಸದಾಗಿ ಬಿ.ಎ.ಎಂ.ಎಸ್. ಕೋರ್ಸನ್ನು 50 (ಐವತ್ತು) ವಿದ್ಯಾರ್ಥಿಗಳ ಪ್ರವೇಶ ಮಿತಿಯೊಂದಿಗೆ ಪ್ರಾರಂಭಿಸಲು ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** ಕುಲಸಚಿವರು, ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ ಬೆಂಗಳೂರು ಇವರ ಪತ್ರ ಸಂಖ್ಯೆ: ಎಸಿಎ:ಎಫ್:ಎವೈ:56:2003-2004, ದಿನಾಂಕ: 29.12.2003.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಕುಲಸಚಿವರು, ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು ಇವರು ಆತ್ರೇಯ ಛಾರಿಟೇಬಲ್ ಟ್ರಸ್ಟ್, ಆತ್ರೇಯ ಇನ್‌ಸ್ಟ್ಯೂಟ್ ಆಫ್ ಆಯುರ್ವೇದಿಕ್ ವೈದ್ಯಕೀಯ ಕಾಲೇಜು ಮತ್ತು ಆಸ್ಪತ್ರೆ, ಬೆಂಗಳೂರು, ಇವರಿಗೆ 2003–2004ನೇ ಶೈಕ್ಷಣಿಕ ಸಾಲಿನಿಂದ ಹೊಸದಾಗಿ ಬಿ.ಎ.ಎಂ.ಎಸ್. ಕೋರ್ಸನ್ನು 50 (ಐವತ್ತು) ವಿದ್ಯಾರ್ಥಿಗಳ ಪ್ರವೇಶ ಮಿತಿಯೊಂದಿಗೆ ಸಂಯೋಜನೆ ನೀಡಲು ವಿಶ್ವವಿದ್ಯಾನಿಲಯದ ಸಿಂಡಿಕೇಟ್ ಶಿಫಾರಸ್ಸು ಮಾಡಿರುತ್ತದೆ.

ಸರ್ಕಾರವು ವಿಶ್ವವಿದ್ಯಾಲಯದ ಪ್ರಸ್ತಾವನೆಯನ್ನು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 36 ಪಿಟಿಡಿ 2004, ಬೆಂಗಳೂರು, ದಿನಾಂಕ: 20ನೇ ಫೆಬ್ರವರಿ 2004**

1994ನೇ ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯದ ಅಧಿ ನಿಯಮದ 45ನೇ ಪ್ರಕರಣದ (5)ನೇ ಉಪ ಪ್ರಕರಣದಡಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಆತ್ರೇಯ ಛಾರಿಟೇಬಲ್ ಟ್ರಸ್ಟ್, ಆತ್ರೇಯ ಇನ್‌ಸ್ಟ್ಯೂಟ್ ಆಫ್ ಆಯುರ್ವೇದಿಕ್ ವೈದ್ಯಕೀಯ ಕಾಲೇಜು ಮತ್ತು ಆಸ್ಪತ್ರೆ, ದೊಡ್ಡಬಳ್ಳಾಪುರ, ಬೆಂಗಳೂರು, ಇವರಿಗೆ 2003–2004ನೇ ಶೈಕ್ಷಣಿಕ ಸಾಲಿನಿಂದ ಹೊಸದಾಗಿ ಬಿ.ಎ.ಎಂ.ಎಸ್. ಕೋರ್ಸನ್ನು 50 (ಐವತ್ತು) ವಿದ್ಯಾರ್ಥಿಗಳ ಪ್ರವೇಶ ಮಿತಿಯೊಂದಿಗೆ ಪ್ರಾರಂಭಿಸಲು ಈ ಕೆಳಕಂಡ ಷರತ್ತುಗಳನ್ನು ಪೂರೈಸುವ ನಿಬಂಧನೆಗೊಳಪಟ್ಟು ಸಂಯೋಜನೆ ನೀಡಲು ಶಿಫಾರಸ್ಸು ಮಾಡಿದೆ.

1) ಭಾರತೀಯ ವೈದ್ಯಕೀಯ ಕೇಂದ್ರೀಯ ಪರಿಷತ್ತು, ನವದೆಹಲಿ ಇವರ ಪೂರ್ವಾನುಮತಿ ಪಡೆಯದೆ ಕಾಲೇಜನ್ನು ಸಂಸ್ಥೆಯವರು ಪ್ರಾರಂಭಿಸಕೂಡದು.
2) ಕೋರ್ಸನ್ನು ಪ್ರಾರಂಭಿಸಲು ರಾಜೀವ್‌ಗಾಂಧಿ ವಿಶ್ವವಿದ್ಯಾಲಯ ಇವರ ಅನುಮತಿ ಪಡೆಯತಕ್ಕದ್ದು.
3) ಸಂಸ್ಥೆಯವರು ಸರ್ಕಾರವು ನಿಗದಿಪಡಿಸಿರುವ ವಿದ್ಯಾರ್ಥಿಗಳ ಪ್ರವೇಶ ಸಂಖ್ಯೆಗೆ ಮಾತ್ರ ಸೀಮಿತವಾಗಿರುತ್ತದೆ. ನಿಗದಿಪಡಿಸಿದ ಪ್ರವೇಶ ಸಂಖ್ಯೆಗಿಂತ ಹೆಚ್ಚು ಸಂಖ್ಯೆಯಲ್ಲಿ ವಿದ್ಯಾರ್ಥಿಗಳನ್ನು ದಾಖಲಿಸಿಕೊಂಡಲ್ಲಿ ಸಂಬಂಧಿಸಿದ ಸಂಸ್ಥೆಯವರೇ ಹೊಣೆಗಾರರನ್ನಾಗಿ ಮಾಡಲಾಗುವುದು.
4) ಭಾರತೀಯ ವೈದ್ಯಕೀಯ ಕೇಂದ್ರೀಯ ಪರಿಷತ್ತು ನವದೆಹಲಿ ಇವರು ನಿಗದಿಪಡಿಸಿರುವ ಕನಿಷ್ಟ ಸೌಲಭ್ಯಗಳನ್ನು ಒದಗಿಸತಕ್ಕದ್ದು.
5) ಈ ಕಾಲೇಜುಗಳು ಶಾಶ್ವತವಾಗಿ ಅನುದಾನ ಕೋರಬಾರದು.
6) ಸರ್ಕಾರಿ ಸೀಟುಗಳ ಹಂಚಿಕೆಯಲ್ಲಿ ಹಾಲಿ ಜಾರಿಯಲ್ಲಿರುವ ನಿಯಮಗಳು ಈ ಕಾಲೇಜಿಗೂ ಅನ್ವಯಿಸುತ್ತದೆ.
7) ಸಂಸ್ಥೆಯವರು ಕಾಲೇಜು ಪ್ರಾರಂಭಿಸಲು ಬೇಕಾದ ಪಠ್ಯವನ್ನು ಹಾಗೂ ಸಾಮಾಗ್ರಿಗಳ ಮಾಹಿತಿಯನ್ನು ಭಾರತೀಯ ವೈದ್ಯ ಪದ್ಧತಿಗಳ ನಿರ್ದೇಶಕರಿಂದ ಪಡೆಯತಕ್ಕದ್ದು.
8) ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಆಯುರ್ವೇದ ಕಾಲೇಜುಗಳು ಕನಿಷ್ಠ 100 ಹಾಸಿಗೆಗಳುಳ್ಳ ಆಸ್ಪತ್ರೆಯನ್ನು ಹೊಂದಿ ವಿವಿಧ ಹೊರ ರೋಗಿಗಳ ತಪಾಸಣಾ ಮತ್ತು ಇತರ ಸೌಲಭ್ಯಗಳನ್ನು ಹೊಂದಿ, ಭವಿಷ್ಯದಲ್ಲಿ ವಿದ್ಯಾರ್ಥಿಗಳ ಪ್ರವೇಶ ಸಂಖ್ಯಾಗನುಗುಣವಾಗಿ ಬೇಕಾಗುವ ಇತರೆ ಎಲ್ಲಾ ಸೌಕರ್ಯಗಳನ್ನು ಪೂರೈಸತಕ್ಕದ್ದು.
9) ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು ಸೂಚಿಸಿರುವ ಮಾರ್ಗಸೂಚಿ ಷರತ್ತುಗಳನ್ನು ನಿಗದಿತ ಅವಧಿಯೊಳಗೆ ಪೂರೈಸತಕ್ಕದ್ದು.
10) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಮಂತ್ರಾಲಯ, ಆಯುಷ್ ಇಲಾಖೆ, ನವದೆಹಲಿ ಇವರ ಅನುಮತಿ ಪಡೆಯತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚೋಮಾನಾಯಕ್ ಜಿ.**

ಪಿ.ಆರ್. 20

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಕಂದಾಯ ಸಚಿವಾಲಯ**

**ವಿಷಯ:** ಮಿತವೇತನ (ಸ್ಟೈಫೆಂಡರಿ) ಗ್ರಾಮಸಹಾಯಕರ ಸೇವೆಯನ್ನು ದಿನಾಂಕ: 1.7.2006 ರಿಂದ 31.3.2007ರ ವರೆಗೆ ಮುಂದುವರೆಸುವ ಕುರಿತು.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಕಂಇ 3 ಎಂ.ವಿ.ಎಸ್. 77, ದಿನಾಂಕ: 16.09.1978
2) ಸರ್ಕಾರದ ಆದೇಶ ಸಂಖ್ಯೆ: ಕಂಇ 82 ಎಂ.ವಿ.ಎಸ್.(1) 82, ದಿನಾಂಕ: 23.09.1982
3) ಸರ್ಕಾರದ ಆದೇಶ ಸಂಖ್ಯೆ: ಕಂಇ 220 ಎಂ.ವಿ.ಎಸ್. 91, ದಿನಾಂಕ: 31.10.1991
4) ಸರ್ಕಾರದ ಆದೇಶ ಸಂಖ್ಯೆ: ಕಂಇ 258 ಎಂ.ವಿ.ಎಸ್. 93, ದಿನಾಂಕ: 28.01.1994
5) ಸರ್ಕಾರದ ಆದೇಶ ಸಂಖ್ಯೆ: ಕಂಇ 201 ಎಂ.ವಿ.ಎಸ್. 96, ದಿನಾಂಕ: 30.10.1996
6) ಸರ್ಕಾರದ ಆದೇಶ ಸಂಖ್ಯೆ: ಕಂಇ 109 ಎಂ.ವಿ.ಎಸ್. 97, ದಿನಾಂಕ: 27.03.1997
7) ಸರ್ಕಾರದ ಆದೇಶ ಸಂಖ್ಯೆ: ಕಂಇ 109 ಎಂ.ವಿ.ಎಸ್. 97, ದಿನಾಂಕ: 31.07.1997
8) ಸರ್ಕಾರದ ಆದೇಶ ಸಂಖ್ಯೆ: ಕಂಇ 109 ಎಂ.ವಿ.ಎಸ್. 97 (ಭಾಗ), ದಿನಾಂಕ: 31.12.1997
9) ಸರ್ಕಾರದ ಆದೇಶ ಸಂಖ್ಯೆ: ಕಂಇ 109 ಎಂ.ವಿ.ಎಸ್. 97 (ಭಾಗ), ದಿನಾಂಕ: 08.07.1998
10) ಸರ್ಕಾರದ ಆದೇಶ ಸಂಖ್ಯೆ: ಕಂಇ 109 ಎಂ.ವಿ.ಎಸ್. 97 (ಭಾಗ), ದಿನಾಂಕ: 06.01.1999

